# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಫೆಬ್ರವರಿ ೨೭, ೨೦೧೪ (ಫಾಲ್ಗುಣ ೮, ಶಕ ವರ್ಷ ೧೯೩೫)<br>Bangalore, Thursday, February 27, 2014 (Phalguna 8, Shaka Varsha 1935) | ಸಂಚಿಕೆ ೯<br>Issue 9 |
|---|---|---|


## ಭಾಗ ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಛ ನ್ಯಾಯಾಲಯವು ಮಾಡಿದ ನಿಯಮಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ಅಧಿಸೂಚನೆ ಸಂಖ್ಯೆ: ಸಿಆಸುಇ 44 ಸೇಸ್ಥಅ 2013, ಬೆಂಗಳೂರು, ದಿನಾಂಕ: 22.02.2014.**

ಕರ್ನಾಟಕ ದಿನಗೂಲಿ ನೌಕರರ ಕ್ಷೇಮಾಭಿವೃದ್ಧಿ ನಿಯಮಗಳು, 2013ನ್ನು ಹೊರಡಿಸುವ ಸಂಬಂಧ ದಿನಾಂಕ: 30.11.2013ರ ಅಧಿಸೂಚನೆ ಸಂಖ್ಯೆ ಸಿಆಸುಇ 44 ಸೇಸ್ಥಅ 2013ರಲ್ಲಿ ಪ್ರಕಟಿಸಿರುವ ಕರಡನ್ನು ಅಧಿಕೃತ ರಾಜ್ಯ ಪತ್ರದಲ್ಲಿ ಪ್ರಕಟಣೆಗೊಂಡ ದಿನಾಂಕದಿಂದ 15 ದಿನಗಳೊಳಗಾಗಿ ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ ಆಕ್ಷೇಪಣೆ ಮತ್ತು ಸಲಹೆಗಳನ್ನು ಆಹ್ವಾನಿಸಿ ದಿನಾಂಕ: 30.11.2013ರ ಕರ್ನಾಟಕ ರಾಜ್ಯ ಪತ್ರದ ಭಾಗ–4ಎ (ನಂ 1307) ರಲ್ಲಿ ಕರ್ನಾಟಕ ದಿನಗೂಲಿ ನೌಕರರ ಕ್ಷೇಮಾಭಿವೃದ್ಧಿ ಅಧಿನಿಯಮ, 2012 (2013ರ ಕರ್ನಾಟಕ ಅಧಿನಿಯಮ ಸಂಖ್ಯೆ 19) ಸೆಕ್ಷನ್ 11ರ ಉಪ ಸೆಕ್ಷನ್ (1)ರಲ್ಲಿ ಪ್ರದತ್ತ ಮಾಡಿರುವ ಅಧಿಕಾರವನ್ನು ಪ್ರಯೋಗಿಸಿ ಪ್ರಕಟಿಸಲಾಗಿರುವುದರಿಂದ;

ಸದರಿ ರಾಜ್ಯ ಪತ್ರವನ್ನು 30.11.2013ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು, ಸದರಿ ಕರಡಿನ ಬಗ್ಗೆ ಸ್ವೀಕರಿಸಲಾದ ಆಕ್ಷೇಪಣೆ/ಸಲಹೆಗಳನ್ನು ರಾಜ್ಯ ಸರ್ಕಾರವು ಪರಿಗಣಿಸಿರುವುದರಿಂದ;

ಈಗ, ಕರ್ನಾಟಕ ದಿನಗೂಲಿ ನೌಕರರ ಕ್ಷೇಮಾಭಿವೃದ್ಧಿ ಅಧಿನಿಯಮ 2012ರ (2013ರ ಕರ್ನಾಟಕ ಅಧಿನಿಯಮ ಸಂಖ್ಯೆ 19) ನಿಯಮ 11 ರಲ್ಲಿ ಪ್ರದತ್ತ ಮಾಡಿರುವ ಅಧಿಕಾರವನ್ನು ಪ್ರಯೋಗಿಸಿ ಕರ್ನಾಟಕ ಸರ್ಕಾರವು ಈ ಮೂಲಕ ಈ ಕೆಳಕಂಡ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**ನಿಯಮಗಳು**

**1. ಹೆಸರು ಮತ್ತು ಪ್ರಾರಂಭ:–** (1) ಈ ನಿಯಮಗಳನ್ನು ಕರ್ನಾಟಕ ದಿನಗೂಲಿ ನೌಕರರ ಕ್ಷೇಮಾಭಿವೃದ್ಧಿ ನಿಯಮಗಳು, 2013 ಎಂದು ಕರೆಯತಕ್ಕದ್ದು.

(2) ಇವುಗಳು ಅಧಿಕೃತ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು:–** ಈ ನಿಯಮಗಳಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) “ಅಧಿನಿಯಮ” ಎಂದರೆ,– “ಕರ್ನಾಟಕ ದಿನಗೂಲಿ ನೌಕರರ ಕ್ಷೇಮಾಭಿವೃದ್ಧಿ ಅಧಿನಿಯಮ, 2012” (2013ರ ಕರ್ನಾಟಕ ಅಧಿನಿಯಮ ಸಂಖ್ಯೆ 19);

(ಬಿ) ಈ ನಿಯಮಗಳಲ್ಲಿ ಪ್ರಯೋಗಿಸಿರುವ ಪದಗಳು ಮತ್ತು ಅಭಿವ್ಯಕ್ತಿಗಳಿಗೆ ಪರಿಭಾಷೆಯನ್ನು ನೀಡದೇ ಇದ್ದಲ್ಲಿ ಅವುಗಳು ಕರ್ನಾಟಕ ನಾಗರಿಕ ಸೇವಾ, (ಸಾಮಾನ್ಯ ನೇಮಕಾತಿ) ನಿಯಮಗಳು, 1977 ಅಥವಾ ಕರ್ನಾಟಕ ನಾಗರಿಕ ಸೇವಾ ಕಾಯ್ದೆ, 1978 ಅಥವಾ ಅದರಡಿ ರಚಿಸಲಾದ ಇತರೆ ನಿಯಮಗಳಲ್ಲಿರುವ ಅರ್ಥವನ್ನೇ ಹೊಂದಿರುತ್ತವೆ.

**3. ದಿನಗೂಲಿ ನೌಕರರ ಮುಂದುವರಿಕೆ:–** ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿನ ಸಂಬಂಧಿಸಿದ ಆಡಳಿತ ಇಲಾಖೆಯು ಈ ಅಧಿನಿಯಮದ ಪ್ರಾರಂಭದ ದಿನಾಂಕದಿಂದ ಒಂದು ವರ್ಷದ ಒಳಗಾಗಿ ಎಲ್ಲಾ ಸಂಸ್ಥೆಗಳ ಅರ್ಹ ದಿನಗೂಲಿ ನೌಕರರ ಹೆಸರುಗಳನ್ನು ಅಧಿಸೂಚಿಸತಕ್ಕದ್ದು.

**4. ದಿನಗೂಲಿ ನೌಕರರ ಷರತ್ತು ಮತ್ತು ನಿಬಂಧನೆಗಳು:–** (1) ಒಬ್ಬ ಮಹಿಳಾ ದಿನಗೂಲಿ ನೌಕರಳು 180 ದಿನಗಳ ಪ್ರಸೂತಿ ರಜೆಗೆ ಅರ್ಹಳಾಗಿರತಕ್ಕದ್ದು.

(2) ಒಬ್ಬ ಪುರುಷ ದಿನಗೂಲಿ ನೌಕರನು 15 ದಿನಗಳ ಪೆಟರ್ನಿಟಿ ರಜೆಗೆ ಅರ್ಹನಾಗಿರತಕ್ಕದ್ದು.

(3) ಒಬ್ಬ ದಿನಗೂಲಿ ನೌಕರನಿಗೆ 60 ವರ್ಷಗಳ ವಯಸ್ಸಾದ ತರುವಾಯ, ಪೂರ್ಣಗೊಳಿಸಿದ ಸೇವೆಯ ಪ್ರತಿಯೊಂದು ವರ್ಷಕ್ಕೆ 15 ದಿನಗಳ ವೇತನದಂತೆ ಗರಿಷ್ಠ 12 ತಿಂಗಳುಗಳ ವೇತನಕ್ಕೆ ಮಿತಿಗೊಳಿಸಿದ ಎಕ್ಸ್–ಗ್ರೇಷಿಯವನ್ನು (ಅನುಗ್ರಹ ಪೂರ್ವಕ) ಆತನಿಗೆ ನೀಡತಕ್ಕದ್ದು.

(4) ಪಿಂಚಣಿ ನಿಧಿ ನಿರ್ವಹಣ ಮತ್ತು ಅಭಿವೃದ್ಧಿ ಪ್ರಾಧಿಕಾರ ನಿರ್ವಹಿಸುವ ಹೊಸ ಪಿಂಚಣಿ ಯೋಜನೆ (ಎನ್‌ಪಿಎಸ್) ಸ್ವಾವಲಂಬನ್ ಯೋಜನೆಯನ್ನು ದಿನಗೂಲಿ ನೌಕರನಿಗೆ ಅನ್ವಯಿಸತಕ್ಕದ್ದು.

(5) ಒಬ್ಬ ದಿನಗೂಲಿ ನೌಕರನು ಸೇವೆಯಲ್ಲಿ ಮುಂದುವರಿದ ವೃಂದದಲ್ಲಿ ಜ್ಯೇಷ್ಠತೆಗೆ ಅರ್ಹನಾಗುವುದಿಲ್ಲ ಮತ್ತು ಉಳಿದ ಸೇವಾ ಅವಧಿಯಲ್ಲಿ ಯಾವುದೇ ಮುಂಬಡ್ತಿಗೆ ಅರ್ಹನಾಗತಕ್ಕದ್ದಲ್ಲ.

**5. ದುರ್ವರ್ತನೆಗಾಗಿ ತೆಗೆದುಹಾಕುವುದು:–** (1) ಕರ್ನಾಟಕ ನಾಗರಿಕ ಸೇವೆಗಳ (ನಡತೆ) ನಿಯಮಗಳು, 1966ರ ಉಪಬಂಧಗಳು ಯಥೋಚಿತ ವ್ಯತ್ಯಾಸಗಳೊಂದಿಗೆ ದಿನಗೂಲಿ ನೌಕರನಿಗೆ ಅನ್ವಯವಾಗತಕ್ಕದ್ದು. ಆತನು, ಕೆಲಸದಿಂದ ತೆಗೆದುಹಾಕುವುದು ಒಳಗೊಂಡಂತೆ ಅಂತಹ ಶಿಸ್ತು ಕ್ರಮಕ್ಕೆ ಹೊಣೆಗಾರನಾಗತಕ್ಕದ್ದು. ದಿನಗೂಲಿ ನೌಕರನು ಆತನು ಎಸಗಿದ ದುರ್ನಡತೆ ಅಥವಾ ಅಸಭ್ಯ ನಡವಳಿಕೆಗೆ ಸಂಬಂಧಿಸಿದಂತೆ ಕ್ರಮ ತೆಗೆದುಕೊಳ್ಳಲು ಉದ್ದೇಶಿಸಿದ್ದಲ್ಲಿ, ಆ ವಿಚಾರಕ್ಕೆ ಸಂಬಂಧಿಸಿದಂತೆ ಆತನಿಗೆ ಲಿಖಿತ ಮೂಲಕ ತಿಳಿಸಿ ಅದರ ವಿರುದ್ಧವಾಗಿ ತನ್ನ ಅಹವಾಲನ್ನು ಹೇಳಿಕೊಳ್ಳಲು ಯುಕ್ತ ಅವಕಾಶವನ್ನು ಕಲ್ಪಿಸತಕ್ಕದ್ದು.

(2) ನೇಮಕಾತಿ ಪ್ರಾಧಿಕಾರವು, ದಿನಗೂಲಿ ನೌಕರನು ಸಲ್ಲಿಸುವ ಮನವಿಯನ್ನು ಪರಿಗಣಿಸಿ, ಪ್ರತಿಯೊಂದು ದುರ್ನಡತೆ ಅಥವಾ ಅಸಭ್ಯ ವರ್ತನೆಗೆ ಸಂಬಂಧಿಸಿದಂತೆ ತನ್ನ ನಿಲುವನ್ನು ದಾಖಲಿಸಿ ಮತ್ತು ರುಜುವಾತಾದ ದುರ್ನಡತೆಗೆ ಸಂಬಂಧಿಸಿದಂತೆ ಒಂದು ಆದೇಶ ಹೊರಡಿಸುವುದರ ಮುಖಾಂತರ ದಿನಗೂಲಿ ನೌಕರನನ್ನು ಸೇವೆಯಿಂದ ತೆಗೆದುಹಾಕಬಹುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಡಾ॥ ಮಂಗಳ ಜಿ.ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು–1).

## PERSONNEL AND ADMINISTRATIVE REFORMS SECRETARIAT

**NO. DPAR 44 SLC 2013, BANGALORE, DATED: 22.02.2014.**

**NOTIFICATION**

The draft of the Karnataka Daily Wage Employees Welfare Rules, 2013, which the Government of Karnataka proposes to make in exercise of the powers conferred by section 11 of the Karnataka Daily Wage Employees Welfare Act, 2012 (Karnataka Act No. 19 of 2013) was published in part IV(a) of the Karnataka Gazette dated 30.11.2013, as required by sub-section (1) of section 11 of the said Act, for the information of all persons likely to be affected thereby;

Whereas, the said Gazette was made available to the public on 30.11.2013;

And Whereas the objections and suggestions received in this behalf have been considered by the State Government.

Now therefore, in exercise of the powers conferred by section 11 of the Karnataka Daily Wage Employees Welfare Act, 2012 (Karnataka Act 19 of 2013) the Government of Karnataka hereby makes the following rules namely:-

**RULES**

**1. Title and Commencement:-** (1) These rules may be called the Karnataka Daily Wage Employees Welfare Rules, 2013.

(2) They shall come into force from the date of their publication in the Official Gazette.

**2. Definitions:-** In these rules unless the context otherwise requires,-

(a) the "Act" means "The Karnataka Daily Wage Employees Welfare Act, 2012 (Karnataka Act No. 19 of 2013);

(b) words and expressions used in these rules but not defined shall have the same meaning assigned to it in the Karnataka State Civil Services (General Recruitment) Rules, 1977 or in the Karnataka State Civil Services Act, 1978 or any other rules made thereunder;

**3. Continuation of Daily Wage Employees:-** The concerned Administrative Department in the Karnataka Government Secretariat shall within one year from the date of commencement of the Act, notify the names of eligible daily wage employees of all establishments.

**4. Terms and Conditions of Daily Wage Employees:-** (1) A Female Daily Wage Employee shall be entitled for maternity leave of 180 days.

(2) A Male Daily Wage Employee shall be entitled for paternity leave of 15 days.

(3) A Daily Wage Employee shall be paid after completion of 60 years of age an ex-gratia of 15 days pay for every completed year of service subject to a maximum of 12 months pay.

(4) New Pension Scheme (NPS) Swavalamban Yojana Administered by the Pension Fund Regulatory and Development Authority shall be applicable to the Daily Wage Employee.

(5) A Daily Wage Employee shall not be entitled for seniority in the cadre in which he is continued in service and he shall not be entitled for any promotion during his remaining service.

**5. Termination for misconduct:-** (1) The provisions of the Karnataka Civil Services (Conduct) Rules, 1966 shall mutatis mutandis be applicable to the daily wage employee. He shall be liable for disciplinary action including removal from service. After informing the daily wage employee in writing of the proposal to take action against him and of the imputations of misconduct or misbehaviour on which it is proposed to be taken, and giving him a reasonable opportunity for making such representation as he may wish to make against the proposal.

(2) The appointing authority after taking into consideration the representation, if any, submitted by the daily wage employee, by recording a finding on each imputation of misconduct or misbehaviour and for proved charge of misconduct shall pass an order terminating the services of a daily wage employee.

By Order and in the name of the Governor of Karnataka,
**Dr. Mangala G.S.**
Under Secretary to Government
Department of Personnel and Administrative Reforms (Service Rules-1)

**PR.112**
**SC.1000**

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

**ಸಂಖ್ಯೆ: ಸಂವ್ಯಶಾಇ 49 ರಾಶಾಪ್ರ 2013 ಬೆಂಗಳೂರು, ದಿನಾಂಕ: 09.01.2014**

**ಅಧಿಸೂಚನೆ**

The Karnataka Town and Country Planning Act, 1961 ಇದರ ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5A ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

## ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961

### ಪ್ರಕರಣಗಳ ಅನುಕ್ರಮಣಿಕೆ

**ಪ್ರಕರಣಗಳು:**

15. ಕಟ್ಟಡದ ಅಥವಾ ಭೂಮಿಯ ಅಭಿವೃದ್ಧಿಗಾಗಿ ಅನುಮತಿ
16. ಕೆಲವು ಪ್ರಕರಣಗಳಲ್ಲಿ ಅನುಮತಿಯನ್ನು ನಿರಾಕರಿಸಿದಾಗ ಭೂಮಿಯನ್ನು ಖರೀದಿಸಲು ಬಾಧ್ಯತೆ
17. ಪ್ಲಾಟಿನ ಒಳವಿಭಾಗ ಮಾಡುವುದಕ್ಕಾಗಿ ಅಥವಾ ಖಾಸಗಿ ಬೀದಿಯನ್ನು ರಚಿಸುವುದಕ್ಕಾಗಿ ಮಂಜೂರಾತಿ
18. ಭೂಮಿಯ ಅಥವಾ ಕಟ್ಟಡದ ಬಳಕೆಯಲ್ಲಿ ಬದಲಾವಣೆಗಾಗಿ ಅನುಮತಿಯ ಕೆಲವು ಪ್ರಕರಣಗಳಲ್ಲಿ ಫೀಜಿನ ವಸೂಲಿ
18ಎ. ಉಪಕರವನ್ನು ಮತ್ತು ಮೇಲ್ತೆರಿಗೆಯನ್ನು ವಿಧಿಸುವುದು ಮತ್ತು ಸಂಗ್ರಹಿಸುವುದು

**ಅಧ್ಯಾಯ - IV**

ಬೃಹತ್ ಯೋಜನೆಯ ಜಾರಿ

19. xxxx
20. xxxx
21. xxxx
22. xxxx
23. xxxx
24. ಸಮಗ್ರ ಅಭಿವೃದ್ಧಿ ಯೋಜನೆಯ ಜಾರಿ
25. xxxx

**ಅಧ್ಯಾಯ – V**

**ಪಟ್ಟಣ ಯೋಜಿತ ಕಾರ್ಯಯೋಜನೆಗಳು**

26. ಪಟ್ಟಣದ ಯೋಜಿತ ಕಾರ್ಯಯೋಜನೆಯನ್ನು ಸಿದ್ಧಪಡಿಸುವುದು ಮತ್ತು ಅದರ ಒಳಾಂಶಗಳು
27. ಪ್ರವೇಶದ ಹಕ್ಕು
28. ಯಾವ ಭೂಮಿಗೆ ಸಂಬಂಧಿಸಿದಂತೆ ಪಟ್ಟಣದ ಯೋಜಿತ ಕಾರ್ಯಯೋಜನೆಯನ್ನು ಸಿದ್ಧಪಡಿಸಬಹುದೋ ಆ ಭೂಮಿ
29. ಕಾರ್ಯಯೋಜನೆಯನ್ನು ಸಿದ್ಧಪಡಿಸುವ ಉದ್ದೇಶದ ಬಗ್ಗೆ ಘೋಷಣೆ
30. ಕರಡು ಕಾರ್ಯಯೋಜನೆಯನ್ನು ಸಿದ್ಧಪಡಿಸುವುದು ಮತ್ತು ಅದರ ಪ್ರಕಟಣೆ
31. ಕಾರ್ಯ ಯೋಜನೆಯನ್ನು ಸಿದ್ಧಪಡಿಸಲು ಯೋಜನಾ ಪ್ರಾಧಿಕಾರವನ್ನು ಅಗತ್ಯಪಡಿಸಲು ರಾಜ್ಯ ಸರ್ಕಾರದ ಅಧಿಕಾರ
32. ಕರಡು ಕಾರ್ಯಯೋಜನೆಯ ಒಳಾಂಶಗಳು
33. ಪುನರ್‌ರಚಿತ ಪ್ಲಾಟು
34. ಆಕ್ಷೇಪಣೆಗಳ ಪರಿಶೀಲನೆ ಮತ್ತು ಕರಡು ಕಾರ್ಯಯೋಜನೆಯ ಮಂಜೂರಾತಿ
35. ಕಾರ್ಯಯೋಜನೆಯನ್ನು ಸಿದ್ಧಪಡಿಸಲು ಘೋಷಣೆಯನ್ನು ಮಾಡಿದ ತರುವಾಯ ನಿರ್ಬಂಧಗಳು
36. ನಿಯಮ, ಉಪವಿಧಿ, ಇತ್ಯಾದಿಗಳನ್ನು ಅಮಾನತ್ತಿನಲ್ಲಿಡಲು ರಾಜ್ಯ ಸರ್ಕಾರದ ಅಧಿಕಾರ

**ಅಧ್ಯಾಯ - VI**

**ಪಟ್ಟಣ ಯೋಜನಾ ಅಧಿಕಾರಿ ಮತ್ತು ಅವರ ಕರ್ತವ್ಯಗಳು**

37. ಪಟ್ಟಣ ಯೋಜನಾ ಅಧಿಕಾರಿಯ ನೇಮಕ
38. ಪಟ್ಟಣ ಯೋಜನಾ ಅಧಿಕಾರಿಯ ಕರ್ತವ್ಯಗಳು
39. ಪಟ್ಟಣ ಯೋಜನಾ ಅಧಿಕಾರಿಯ ಕೆಲವು ತೀರ್ಮಾನಗಳು ನಿರ್ದೇಶಕರಿಗೆ ಮಾಡಿಕೊಳ್ಳುವ ಅಪೀಲಿಗೆ ಒಳಪಟ್ಟು ಅಂತಿಮವಾಗಿರುವುದು
40. ಅಪೀಲು
41. ಯಾವುದೇ ಅಪೀಲನ್ನು ದಾಖಲ್ಮಾಡಿರದಿದ್ದರೆ ಪಟ್ಟಣ ಯೋಜನಾ ಅಧಿಕಾರಿಯ ತೀರ್ಮಾನವು ಅಂತಿಮವಾಗಿರತಕ್ಕದ್ದು ಮತ್ತು ಅಪೀಲಿನಲ್ಲಿ ಆದ ತೀರ್ಮಾನಕ್ಕನುಸಾರವಾಗಿ ಕಾರ್ಯಯೋಜನೆಯಲ್ಲಿ ವ್ಯತ್ಯಾಸಗೊಳಿಸುವುದು

**ಅಧ್ಯಾಯ - VII**

**ವಿವಾದಿತ ಒಡೆತನ, ಪ್ರಾರಂಭಿಕ ಕಾರ್ಯಯೋಜನೆಗಳು ಮತ್ತು ಅಂತಿಮ ಕಾರ್ಯಯೋಜನೆ, ಅದರ ಮಂಜೂರಾತಿ ಮತ್ತು ಜಾರಿ**

42. ವಿವಾದಿತ ಒಡೆತನ
43. ಪಟ್ಟಣ ಯೋಜನಾ ಅಧಿಕಾರಿಯು ಕೆಲವು ಸಂದರ್ಭಗಳಲ್ಲಿ ಪ್ರಾರಂಭಿಕ ಕಾರ್ಯಯೋಜನೆಯನ್ನು ತಯಾರಿಸುವುದು
44. ಸೇತುವೆಗಳು, ರಸ್ತೆಗಳು, ಇತ್ಯಾದಿಗಳಿಗಾಗಿ ಅಗತ್ಯವಾದ ಭೂಮಿಯ ಸ್ವಾಧೀನವನ್ನು ವಹಿಸಿಕೊಡುವ ಅಧಿಕಾರ
45. ಅಂತಿಮ ಕಾರ್ಯಯೋಜನೆ
46. ಅಂತಿಮ ಕಾರ್ಯಯೋಜನೆಯ ಪರಿಣಾಮ
47. ಕಾರ್ಯಯೋಜನೆಯನ್ನು ಜಾರಿಗೊಳಿಸುವ ಅಧಿಕಾರ
48. ತಪ್ಪು, ಅಕ್ರಮ ಅಥವಾ ಅನೌಪಚಾರಿಕತೆಯ ಕಾರಣದ ಮೇಲೆ ಕಾರ್ಯಯೋಜನೆಯಲ್ಲಿ ವ್ಯತ್ಯಾಸ ಮಾಡಲು ಅಧಿಕಾರ
49. ಪಟ್ಟಣ ಯೋಜನಾ ಕಾರ್ಯಯೋಜನೆಯನ್ನು ರದ್ದುಗೊಳಿಸಲು ಅಥವಾ ವ್ಯತ್ಯಾಸಗೊಳಿಸಲು ಅಧಿಕಾರ
50. ಅಂತಿಮ ಕಾರ್ಯಯೋಜನೆಯನ್ನು ವ್ಯತ್ಯಾಸಗೊಳಿಸಿದಾಗ ಅಥವಾ ರದ್ದುಗೊಳಿಸಿದಾಗ ನಷ್ಟ ಪರಿಹಾರ ಮತ್ತು ಖರ್ಚುಗಳನ್ನು ಹಂಚಿಕೊಳ್ಳುವುದು

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

**I**

**ಅಧಿನಿಯಮ ಸಂಖ್ಯೆ 1963ರ 11.–** ಹೊಸ ಮೈಸೂರು ರಾಜ್ಯದ ರಚನೆಯಾಗಿರುವುದರಿಂದ, ರಾಜ್ಯದಲ್ಲಿ ಭೂಬಳಕೆ ಮತ್ತು ಅಭಿವೃದ್ಧಿಯ ಯೋಜಿತ ಬೆಳವಣಿಗೆಯನ್ನು ವಿನಿಯಮಿಸುವುದಕ್ಕೆ ಮತ್ತು ಪಟ್ಟಣದ ಯೋಜಿತ ಕಾರ್ಯಯೋಜನೆಯನ್ನು ರೂಪಿಸುವುದಕ್ಕೆ ಮತ್ತು ಅದನ್ನು ಕಾರ್ಯಗತಗೊಳಿಸುವುದಕ್ಕೆ ಏಕ ರೂಪದ ಕಾನೂನು ಹೊಂದುವುದು ಅವಶ್ಯವಾಗಿದೆ. ಆರ್ಥಿಕ ಯೋಜನೆಯನ್ನು ರೂಪಿಸುವುದಕ್ಕೆ ಮೊದಲು ವಾಸ್ತವಿಕ ಯೋಜನೆಯನ್ನು ರೂಪಿಸಬೇಕು. ಇಲ್ಲದಿದ್ದರೆ ನಮ್ಮ ದೇಶದ ನಗರಗಳು, ಪಟ್ಟಣಗಳು ಮತ್ತು ಹಳ್ಳಿಗಳು ಸರಿಯಾದ ಯೋಜನೆಯಿಲ್ಲದೆ ಅವ್ಯವಸ್ಥಿತ ಪ್ರಮಾಣದಲ್ಲಿ ಬೆಳೆದು, ಅನಾರೋಗ್ಯಕರ ವಾತಾವರಣಕ್ಕೆ ಕಾರಣವಾಗುತ್ತದೆ. ಜನರು ಉತ್ತಮವಾಗಿ, ಆರೋಗ್ಯಕರವಾಗಿ ಮತ್ತು ಉಲ್ಲಾಸದಾಯಕ ವಾತಾವರಣದಲ್ಲಿ ಬದುಕಬೇಕಾದರೆ, ವಾಸ್ತವಿಕ ಯೋಜನೆಯ ಜೊತೆಗೆ ಸುಸಂಘಟಿತ ಪ್ರಯತ್ನವೂ ಅಗತ್ಯ. ಉದ್ದೇಶಿತ ವಿಧೇಯಕವು ಪಟ್ಟಣ ಯೋಜನಾ ಸಮಸ್ಯೆಗಳನ್ನು ಪರಿಹರಿಸುತ್ತದೆಂದು ಭಾವಿಸಲಾಗಿದೆ.

(ವಿಧೇಯಕ ಸಂಖ್ಯೆ ಕಾನೂನು 43 ಎಲ್‌ಜಿಎನ್ 60 ರಿಂದ ಪಡೆಯಲಾಗಿದೆ)

**II**

**ತಿದ್ದುಪಡಿ ಅಧಿನಿಯಮ ಸಂಖ್ಯೆ 1964ರ 14.–**ಮೈಸೂರು ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ವಿಧೇಯಕ 1961ಕ್ಕೆ ರಾಷ್ಟ್ರಪತಿಗಳು ಸಮ್ಮತಿ ನೀಡಿರುವುದನ್ನು ತಿಳಿಸುತ್ತಾ ಭಾರತ ಸರ್ಕಾರವು, ಅಧಿನಿಯಮಕ್ಕೆ ಕೆಲವು ತಿದ್ದುಪಡಿಗಳನ್ನು ಮಾಡಲು ಸಲಹೆ ನೀಡಿದೆ. ಅಧಿನಿಯಮದ ಉದ್ದೇಶಗಳಿಗಾಗಿ ಆರ್ಜಿಸಿದ ಭೂಮಿಗೆ ಸಂದಾಯ ಮಾಡಬೇಕಾದ ಪರಿಹಾರಕ್ಕೆ ಸಂಬಂಧಿಸಿದಂತೆ, ಭಾರತ ಸರ್ಕಾರವು, 1956ರ ನವೆಂಬರ್ 1ರಂದು ಇದ್ದಂತೆ ಮಾರುಕಟ್ಟೆ ಮೌಲ್ಯವನ್ನು ಲೆಕ್ಕಕ್ಕೆ ತೆಗೆದುಕೊಳ್ಳುವುದು ಸೂಕ್ತವಲ್ಲವೆಂದು ಹೇಳಿದೆ, ಮತ್ತು ಅದರ ಮೌಲ್ಯವು ಪಟ್ಟಣ ಮೇಲ್ಪಾಟು ಯೋಜನೆಯು ಪ್ರಕಟವಾದ ದಿನಾಂಕದಂದು ಇದ್ದಂತೆ ಮಾರುಕಟ್ಟೆ ಮೌಲ್ಯವಾಗಿರಬಹುದು, ಹಾಗೂ ವಾಸ್ತವಿಕ ಆರ್ಜನೆ ವ್ಯವಹರಣೆಯ ದಿನಾಂಕವು ಅಂಥ ಪ್ರಕಟಣೆಯ ದಿನಾಂಕದಿಂದ ಎರಡು ವರ್ಷಗಳ ತರುವಾಯದಾಗಿದ್ದರೆ, ಅದರ ಮೌಲ್ಯವು, ಭೂಮಿಯ ಆರ್ಜನೆಗಾಗಿ ಅಧಿಸೂಚನೆ ಹೊರಡಿಸಿದ ದಿನಾಂಕಕ್ಕೆ ಎರಡು ವರ್ಷಗಳ ಮುಂಚಿನ ದಿನಾಂಕದಂದು ಇದ್ದಂಥದ್ದು ಆಗಿರಬಹುದು. ಅಲ್ಲದೆ, ಆರ್ಜನೆಯ ಕಡ್ಡಾಯ ಸ್ವರೂಪದ ದೃಷ್ಟಿಯಿಂದ ಶೇಕಡಾ ಹದಿನೈದರಷ್ಟು ಸಮಾಧಾನಾರ್ಥ ಪರಿಹಾರಧನವನ್ನು ಮಂಜೂರು ಮಾಡಬೇಕೆಂದು ಸಲಹೆ ನೀಡಿದೆ. ಕೃಷಿ, ಕೈಗಾರಿಕೆ, ಮುಂತಾದ ಪದಾವಳಿಗಳ ಪರಿಭಾಷೆಯನ್ನು ಸೇರಿಸಬೇಕೆಂದು ಹಾಗೂ 6ನೇ ಪ್ರಕರಣವನ್ನು ತಿದ್ದುಪಡಿ ಮಾಡಬೇಕೆಂದು ಸಹ ಅದು ಸಲಹೆ ನೀಡಿದೆ.

ತೀವ್ರವಾಗಿ ಅಭಿವೃದ್ಧಿ ಹೊಂದುತ್ತಿರುವ ಪ್ರದೇಶಗಳಲ್ಲಿ ಅಧಿನಿಯಮವನ್ನು ತ್ವರಿತವಾಗಿ ಅನುಷ್ಠಾನಗೊಳಿಸುವ ಉದ್ದೇಶಕ್ಕಾಗಿ ಪ್ರತ್ಯೇಕ ಯೋಜನಾ ಪ್ರಾಧಿಕಾರಗಳನ್ನು ಸ್ಥಾಪಿಸುವುದು ಅವಶ್ಯವಾಗಿದೆ. ಈ ಉದ್ದೇಶಕ್ಕಾಗಿ ಸೂಕ್ತ ಉಪಬಂಧಗಳನ್ನು ಕಲ್ಪಿಸಬೇಕಾಗಿದೆ. ಭಾರತ ಸರ್ಕಾರವು ಸಿದ್ಧಪಡಿಸಿರುವ ಮಾದರಿ ಪಟ್ಟಣ ಮತ್ತು ಗ್ರಾಮಾಂತರ ಯೋಜನೆಯಲ್ಲಿ ಕಂಡುಬರುವ ಕೆಲವು ಇತರ ಉಪಬಂಧಗಳನ್ನು ರಾಜ್ಯ ಅಧಿನಿಯಮದಲ್ಲಿ ಸೇರಿಸುವುದು ಅಪೇಕ್ಷಣೀಯವೆಂದು ಪರಿಗಣಿಸಲಾಗಿದೆ. ಅಲ್ಲದೆ, "ಬೆಂಗಳೂರು ಮಹಾನಗರ ಯೋಜನಾ ಮಂಡಳಿ" ಯು ರೂಪಿಸಿರುವ ಸ್ಥೂಲ ಅಭಿವೃದ್ಧಿ ಯೋಜನೆಯ ಆಧಾರದ ಮೇಲೆ ಬೆಂಗಳೂರು ಮಹಾನಗರ ಪ್ರದೇಶಕ್ಕೆ ಸಂಬಂಧಪಟ್ಟ ಯೋಜನೆಯೊಂದಿಗೆ ವ್ಯವಹರಿಸುವುದು ಕೂಡ ಅಪೇಕ್ಷಣೀಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV–2ಎ, ದಿನಾಂಕ 15ನೇ ಅಕ್ಟೋಬರ್ 1963, ಪುಟ 21ರಲ್ಲಿ ಸಂಖ್ಯೆ 6933 ರಲ್ಲಿ ಪ್ರಕಟವಾಗಿದೆ).

**III**

**ತಿದ್ದುಪಡಿ ಅಧಿನಿಯಮ ಸಂಖ್ಯೆ 1968ರ 2.–** ಬೆಂಗಳೂರು ನಗರ ಪೌರಸಭಾ ನಿಗಮ ಅಧಿನಿಯಮ, 1949ಕ್ಕೆ 1966ರ ಅಧಿನಿಯಮ 10ರ ಮೂಲಕ ಮಾಡಿದ ತಿದ್ದುಪಡಿಗಳು ಆಡಳಿತಾಧಿಕಾರಿಯ ನೇಮಕಕ್ಕೆ ಮಾತ್ರ ಉಪಬಂಧಿಸುತ್ತವೆ. ನಿಗಮದ ಆಡಳಿತ ಸುಧಾರಣೆಗಾಗಿ ಇತರೆ ಕೆಲವು ಉಪಬಂಧಗಳನ್ನು ಮಾಡುವುದು ಅವಶ್ಯವೆಂದು ಕಂಡುಬಂದಿದೆ. ವಿಧಾನಮಂಡಲವು ಅಧಿವೇಶನದಲ್ಲಿಲ್ಲದಿದ್ದುದರಿಂದ ಅಧ್ಯಾದೇಶವನ್ನು ಹೊರಡಿಸಲಾಗಿತ್ತು. ಆ ಅಧ್ಯಾದೇಶಕ್ಕೆ ಬದಲಾಗಿ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV–2ಎ, ದಿನಾಂಕ 2ನೇ ಡಿಸೆಂಬರ್ 1967ರಲ್ಲಿ ಪುಟ 33ರಲ್ಲಿ ಸಂಖ್ಯೆ 270 ರಲ್ಲಿ ಪ್ರಕಟವಾಗಿದೆ)

**IV**

**ತಿದ್ದುಪಡಿ ಅಧಿನಿಯಮ ಸಂಖ್ಯೆ 1976ರ 12.–** 1971ರ ನವೆಂಬರ್‌ನಲ್ಲಿ ನಡೆದ ವಸತಿ ಮತ್ತು ನಗರಾಭಿವೃದ್ಧಿ ಸಚಿವರುಗಳ ಸಮ್ಮೇಳನದಲ್ಲಿ ಮಹಾನಗರಗಳ ಅಭಿವೃದ್ಧಿಗಾಗಿ ಒಂದು ಸಾಮಾನ್ಯ ಪ್ರಾಧಿಕಾರವನ್ನು ಸ್ಥಾಪಿಸಬೇಕೆಂದು ಒಪ್ಪಿಕೊಳ್ಳಲಾಗಿತ್ತು.

ಬೆಂಗಳೂರು ನಗರವು ಅದರ ಜನಸಂಖ್ಯೆಗೆ ಅನುಗುಣವಾಗಿ (ಹಿಂದಿನ ಜನಗಣತಿಗನುಸಾರವಾಗಿ) ಒಂದು ಮಹಾನಗರವಾಗಿದೆ. ಬೆಂಗಳೂರು ನಗರ ಪೌರಸಭಾ ನಿಗಮ, ನಗರ ಮೇಲ್ಪಾಟು ನ್ಯಾಸ ಮಂಡಳಿ, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಗೃಹ ನಿರ್ಮಾಣ ಮಂಡಳಿ ಮತ್ತು ಬೆಂಗಳೂರು ನಗರ ಯೋಜನಾ ಪ್ರಾಧಿಕಾರಗಳಂಥ ವಿವಿಧ ಪ್ರಾಧಿಕಾರಗಳು ನಗರ ಪ್ರದೇಶದ ಮೇಲೆ ಅಧಿಕಾರ ವ್ಯಾಪ್ತಿ ಹೊಂದಿವೆ. ಈ ಸಂಸ್ಥೆಗಳ ಕೆಲವು ಕಾರ್ಯಗಳಾದ ಅಭಿವೃದ್ಧಿ, ಯೋಜನೆ ಮುಂತಾದವುಗಳು ಪರಸ್ಪರ ವ್ಯಾಪ್ತವಾಗಿದ್ದು, ಆ ಮೂಲಕ ತಪ್ಪಿಸಬಹುದಾದ ಗೊಂದಲವನ್ನು ಸೃಷ್ಟಿಸಿವೆ. ಅಲ್ಲದೆ, ಸುಸಂಘಟಿತ ಅಭಿವೃದ್ಧಿಗೆ ಅಡಚಣೆಯೊಡ್ಡಿವೆ. ಆದ್ದರಿಂದ, ನಗರ ಪ್ರದೇಶಗಳಿಗೆ ಹೊಂದಿಕೊಂಡಿರುವ ಕಾಲಾನುಕ್ರಮದಲ್ಲಿ ನಗರದ ಭಾಗವಾಗಲಿರುವ ನಗರ ಪ್ರದೇಶಗಳಿಗಾಗಿ ದೆಹಲಿ ಅಭಿವೃದ್ಧಿ ಪ್ರಾಧಿಕಾರದ ಮಾದರಿಯಲ್ಲಿ ಒಂದೇ ಪ್ರಾಧಿಕಾರವನ್ನು ಸ್ಥಾಪಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಮೇಲೆ ಹೇಳಿದ ಸದರಿ ಉದ್ದೇಶಗಳು ಹಾಗೂ 20 ಅಂಶದ ಕಾರ್ಯಕ್ರಮದ ಶೀಘ್ರ ಅನುಷ್ಠಾನಕ್ಕಾಗಿ ಮತ್ತು ಕೇಂದ್ರ ಸಮನ್ವಯ ಪ್ರಾಧಿಕಾರವನ್ನು ಸ್ಥಾಪಿಸುವುದಕ್ಕಾಗಿ ತುರ್ತು ಕ್ರಮ ಕೈಗೊಳ್ಳುವ ಅವಶ್ಯಕತೆ ಇತ್ತು. ಅಲ್ಲದೆ ಅಡ್ಡಾದಿಡ್ಡಿ ಮತ್ತು ಅಕ್ರಮ ಬೆಳವಣಿಗೆಯನ್ನು ಅಭಿವೃದ್ಧಿ ಪ್ರಾಧಿಕಾರವು ತಡೆಗಟ್ಟದಿದ್ದರೆ ಅದು ಹಾಗೆಯೇ ಮುಂದುವರೆಯುತ್ತದೆ ಮತ್ತು ಭವಿಷ್ಯದಲ್ಲಿ ಆ ತಪ್ಪುಗಳನ್ನು ಸರಿಪಡಿಸಲು ಅಥವಾ ತಿದ್ದಿಕೊಳ್ಳಲು ಸಾಧ್ಯವಾಗಲಾರದು.

ಆದ್ದರಿಂದ ಅಧ್ಯಾದೇಶದ ರೂಪದಲ್ಲಿ ಶಾಸನವನ್ನು ತರುವುದು ಅವಶ್ಯಕವಾಗಿತ್ತು.

ಸದರಿ ಅಧ್ಯಾದೇಶಕ್ಕೆ ಬದಲಾಗಿ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ–IV 2ಎ, ದಿನಾಂಕ 5ನೇ ಫೆಬ್ರವರಿ 1976ರಲ್ಲಿ, ಪುಟ 45ರಲ್ಲಿ ಸಂಖ್ಯೆ 688ರಲ್ಲಿ ಪ್ರಕಟಿಸಲಾಗಿದೆ).

**V**

**ತಿದ್ದುಪಡಿ ಅಧಿನಿಯಮ ಸಂಖ್ಯೆ. 1985ರ 39.–**ಬೆಂಗಳೂರು ಮಹಾನಗರ ಪ್ರದೇಶದಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ನೀರು ಸರಬರಾಜು ಮತ್ತು ಗ್ರಾಮಸಾರ ಚರಂಡಿ ಮಂಡಳಿ, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ, ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿ, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಬೆಂಗಳೂರು ನಗರ ನಿಗಮ, ಮುಂತಾದ ಸ್ಥಳೀಯ ಸಂಸ್ಥೆಗಳ ನಡುವೆ ಸರಿಯಾದ ಸಮನ್ವಯ ಇರುವುದಿಲ್ಲ. ಅದಕ್ಕಾಗಿ ಒಂದು ಪ್ರಾಧಿಕಾರವನ್ನು ರಚಿಸುವ ಮೂಲಕ ಈ ಸಂಸ್ಥೆಗಳ ಚಟುವಟಿಕೆಗಳನ್ನು ಸಮನ್ವಯಗೊಳಿಸುವುದು ಅವಶ್ಯವಾಗಿದೆ. ಅಲ್ಲದೆ, ಯೋಜನಾ ಬದ್ಧವಲ್ಲದ ಅಭಿವೃದ್ಧಿ, ಗೃಹ ನಿರ್ಮಾಣ, ನೀರು ಸರಬರಾಜು, ಸಾರಿಗೆ, ಮುಂತಾದವುಗಳಲ್ಲಿ ಉಲ್ಬಣಿಸುತ್ತಿರುವ ಸಮಸ್ಯೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಪ್ರಾಧಿಕಾರವೊಂದನ್ನು ರಚಿಸುವ ತುರ್ತು ಅಗತ್ಯವಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ–IV 2ಎ, ದಿನಾಂಕ 3ನೇ ಡಿಸೆಂಬರ್ 1985ರಲ್ಲಿ, ಪುಟ 19ರಲ್ಲಿ ಸಂಖ್ಯೆ 610ರಲ್ಲಿ ಪ್ರಕಟಿಸಲಾಗಿದೆ.)

**VI**

**ತಿದ್ದುಪಡಿ ಅಧಿನಿಯಮ ಸಂಖ್ಯೆ 1987ರ 34.–** ರಾಜ್ಯದಲ್ಲಿನ ನಗರ ಪ್ರದೇಶಗಳಲ್ಲಿನ ಭೂ ಯೋಜನ ಮತ್ತು ಅಭಿವೃದ್ಧಿಯನ್ನು ತ್ವರಿತಗೊಳಿಸುವ ದೃಷ್ಟಿಯಿಂದ, ಯೋಜನಾ ಪ್ರಾಧಿಕಾರ ಮತ್ತು ಅಭಿವೃದ್ಧಿ ಪ್ರಾಧಿಕಾರ ಇವೆರಡರ ಕಾರ್ಯಗಳನ್ನು ನಿರ್ವಹಿಸುವುದಕ್ಕಾಗಿ ಪ್ರತಿಯೊಂದು ನಗರ ಪ್ರದೇಶಕ್ಕೆ ಒಂದೇ ಏಜೆನ್ಸಿ ಇರುವುದು ಅಪೇಕ್ಷಣೀಯವೆಂದು ಭಾವಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ವಿಧಾನಸಭಾ ವಿಧೇಯಕ ಸಂಖ್ಯೆ 1987ರ 13ರಿಂದ ಪಡೆಯಲಾಗಿದೆ)

**VII**

**ತಿದ್ದುಪಡಿ ಅಧಿನಿಯಮ ಸಂಖ್ಯೆ 1991ರ 2.–** ಅನಧಿಕೃತವಾಗಿ ಸ್ವಾಧೀನಪಡಿಸಿಕೊಂಡ ಸರ್ಕಾರದ ಭೂಮಿಯನ್ನು ಕೆಲವು ಷರತ್ತುಗಳು ಮತ್ತು ನಿರ್ಬಂಧಗಳಿಗೆ ಒಳಪಟ್ಟು ಹಾಗೂ ಸಕ್ರಮೀಕರಣ ಶುಲ್ಕಗಳನ್ನು ಸಂದಾಯ ಮಾಡಿದ ಮೇಲೆ, ಸರ್ಕಾರವು ಸಕ್ರಮಗೊಳಿಸಲು ನಿರ್ಧರಿಸಿದೆ. ಕರ್ನಾಟಕ ಭೂ ಕಂದಾಯ ಅಧಿನಿಯಮ, 1954ರ 94ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಉದ್ದೇಶಿಸಲಾಗಿದೆ ಮತ್ತು ಈ ಮುಂದಿನವುಗಳಿಗೆ ಉಪಬಂಧ ಕಲ್ಪಿಸಲು ಪ್ರಕರಣ 94–ಎ ಯನ್ನು ತರಲು ಪ್ರಸ್ತಾವಿಸಲಾಗಿದೆ:–

(1) ಸರ್ಕಾರದ ಭೂಮಿಯನ್ನು ಅನಧಿಕೃತವಾಗಿ ಸ್ವಾಧೀನಪಡಿಸಿಕೊಂಡಿರುವುದನ್ನು ಶಿಕ್ಷಾರ್ಹವನ್ನಾಗಿ ಮಾಡುವುದು;

(2) 1–1–1989ಕ್ಕಿಂತ ಮುಂಚೆ ಸರ್ಕಾರದ ಭೂಮಿಯನ್ನು ಅನಧಿಕೃತವಾಗಿ ಸ್ವಾಧೀನಪಡಿಸಿಕೊಂಡಿರುವುದನ್ನು ಸಕ್ರಮಗೊಳಿಸುವುದು;

(3) ಸಕ್ರಮಗೊಳಿಸಲು ಉದ್ದೇಶಿಸಿದ ಅನಧಿಕೃತ ಹಿಡುವಳಿಯ ಗರಿಷ್ಠ ವಿಸ್ತೀರ್ಣವು 'ಡಿ' ವರ್ಗದ ಭೂಮಿಯ ಸಂಬಂಧದಲ್ಲಿ 2 ಹೆಕ್ಟೇರುಗಳು ಅಥವಾ ತತ್ಸಮಾನ ವಿಸ್ತೀರ್ಣದ್ದಾಗಿರಬೇಕು;

(4) ಅಂಥ ಭೂಮಿಯು ನಗರದ ಅಥವಾ ನಗರ ಸಭೆಯ ವ್ಯಾಪ್ತಿಯೊಳಗೆ ಇದ್ದರೆ, ಸಕ್ರಮಗೊಳಿಸಬೇಕಾದ ವಿಸ್ತೀರ್ಣವು 2 ಹೆಕ್ಟೇರುಗಳ ಗರಿಷ್ಠ ವಿಸ್ತೀರ್ಣಕ್ಕೆ ಒಳಪಟ್ಟು ಗೊತ್ತುಪಡಿಸಬಹುದಾದಂತೆ ಇರತಕ್ಕದ್ದು;

(5) ಸಕ್ರಮೀಕರಣ ಶುಲ್ಕವು ಭೂಮಿಯ ಕರನಿರ್ಧರಣೆಯ 500 ಪಟ್ಟು ಆಗಿರತಕ್ಕದ್ದು;

(6) ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಪಂಗಡಗಳು, ಮೊತ್ತದ 1/20 ರಷ್ಟನ್ನು ಮಾತ್ರ ಸಂದಾಯ ಮಾಡತಕ್ಕದ್ದು; ಮತ್ತು

(7) ನೆಡು ತೋಪು ಭೂಮಿಗಳನ್ನು, ತೋಟದ ಭೂಮಿಗಳನ್ನು ಹಾಗೂ ಅರಣ್ಯ ಭೂಮಿಗಳನ್ನು ಸಕ್ರಮೀಕರಣದಿಂದ ಹೊರತುಪಡಿಸತಕ್ಕದ್ದು.

ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ಕೃಷಿ ಭೂಮಿಯನ್ನು ಕೃಷಿಯೇತರ ಉದ್ದೇಶಗಳಿಗಾಗಿ ಬಳಸಲು ಜಿಲ್ಲಾಧಿಕಾರಿಯ ಅನುಮತಿ ಪಡೆಯಬೇಕೆಂಬುದನ್ನು ಸುನಿಶ್ಚಿತಗೊಳಿಸಲು 95ನೇ ಪ್ರಕರಣವನ್ನು ಕೂಡ ತಿದ್ದುಪಡಿ ಮಾಡಲು ಉದ್ದೇಶಿಸಲಾಗಿದೆ. ಕೆಲವು ನ್ಯಾಯಿಕ ತೀರ್ಪುಗಳ ಕಾರಣದಿಂದ ಉಂಟಾಗಿರುವ ಸಂದಿಗ್ಧತೆಯನ್ನು ಪರಿಹರಿಸುವುದು ಈ ತಿದ್ದುಪಡಿಯ ಉದ್ದೇಶವಾಗಿದೆ.

ಕೆಲವು ಪ್ರಾಸಂಗಿಕ ಮತ್ತು ಆನುಷಂಗಿಕ ತಿದ್ದುಪಡಿಗಳನ್ನು ಸಹ ಮಾಡಲು ಉದ್ದೇಶಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ–IV, 2ಎ, ದಿನಾಂಕ 20ನೇ ನವೆಂಬರ್ 1990ರಲ್ಲಿ, ಪುಟ 1ರಲ್ಲಿ ಸಂಖ್ಯೆ 1990 ರಲ್ಲಿ ಪ್ರಕಟಿಸಲಾಗಿದೆ.)

## VIII

**ತಿದ್ದುಪಡಿ ಅಧಿನಿಯಮ ಸಂಖ್ಯೆ 1991ರ 17.–** ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961ರಲ್ಲಿ ಈಗಿರುವ ಉಪಬಂಧಗಳಲ್ಲಿ, ಯೋಜನಾ ಪ್ರಾಧಿಕಾರದ ಸದಸ್ಯ ಕಾರ್ಯದರ್ಶಿಯ ಕಾರ್ಯಗಳನ್ನು ನಿರ್ದಿಷ್ಟವಾಗಿ ಹೇಳಿಲ್ಲ. ಅಂಥ ಕಾರ್ಯಗಳನ್ನು ಸ್ಪಷ್ಟವಾಗಿ ಪರಿಭಾಷಿಸಲು ಉದ್ದೇಶಿಸಲಾಗಿದೆ. ಸದಸ್ಯ ಕಾರ್ಯದರ್ಶಿಗೆ, ಇತರ ವಿಷಯಗಳ ಜೊತೆಗೆ, ಈ ಅಧಿನಿಯಮದ ಅಥವಾ ಯಾವುದೇ ಇತರ ಕಾನೂನು ಅಥವಾ ನಿಯಮ ಮುಂತಾದವುಗಳ ಉಪಬಂಧವನ್ನು ಉಲ್ಲಂಘಿಸಿ ಯೋಜನಾ ಪ್ರಾಧಿಕಾರವು ಅಂಗೀಕರಿಸಿದ ನಿರ್ಣಯಗಳನ್ನು ಅಥವಾ ಯೋಜನಾ ಪ್ರಾಧಿಕಾರದ ಹಿತಾಸಕ್ತಿಗೆ ಬಾಧಕವನ್ನು ಉಂಟು ಮಾಡುವ ಯಾವುದೇ ನಿರ್ಣಯವನ್ನು ರಾಜ್ಯಸರ್ಕಾರಕ್ಕೆ ಕಳುಹಿಸಿಕೊಡಲು ಅಧಿಕಾರ ನೀಡಲಾಗಿದೆ.

2. ಸಮಗ್ರ ಅಭಿವೃದ್ಧಿ ಯೋಜನೆಯನ್ನು ಪ್ರಸಕ್ತ ಐದು ವರ್ಷಗಳ ಅವಧಿಯೊಳಗೆ ಪರಿಷ್ಕರಿಸಬೇಕಾಗಿತ್ತು. ಆ ಅವಧಿಯನ್ನು ಹತ್ತು ವರ್ಷಗಳಿಗೆ ಹೆಚ್ಚಿಸಲು ಉದ್ದೇಶಿಸಲಾಗಿದೆ.

3. ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961ರ ಈಗಿರುವ ಉಪಬಂಧಗಳು, ಸ್ಥೂಲ ಅಭಿವೃದ್ಧಿ ಯೋಜನೆಯ ಮೇರೆಗೆ ಯಾವ ಸನ್ನಿವೇಶದಲ್ಲಿ ಭೂಬಳಕೆಯನ್ನು ಒಂದು ಉದ್ದೇಶದಿಂದ ಮತ್ತೊಂದು ಉದ್ದೇಶಕ್ಕೆ ಬದಲಾಯಿಸಲು ಅನುಮತಿಸಬಹುದಾಗಿತ್ತೋ ಆ ಸನ್ನಿವೇಶಗಳನ್ನು ತುಂಬಾ ನಿರ್ದಿಷ್ಟವಾಗಿ ಹೇಳಿಲ್ಲ. ಆದ್ದರಿಂದ, 14ಎ ಪ್ರಕರಣವನ್ನು ಸೇರಿಸುವ ಮೂಲಕ ಇದಕ್ಕಾಗಿ ನಿರ್ದಿಷ್ಟ ಉಪಬಂಧಗಳನ್ನು ಕಲ್ಪಿಸುವ ಮೂಲಕ, ಯಾವ ಸನ್ನಿವೇಶಗಳ ಅಡಿಯಲ್ಲಿ ಅಂಥ ಭೂಬಳಕೆಯ ಬದಲಾವಣೆಯನ್ನು ಅನುಮತಿಸಬಹುದಾಗಿದೆಯೋ ಆ ವಿವಿಧ ಸನ್ನಿವೇಶಗಳನ್ನು ನಿರ್ದಿಷ್ಟಪಡಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ. ಈ ಹೊಸ ಪ್ರಕರಣವು ಭೂ ಬಳಕೆಯಲ್ಲಿ ಬದಲಾವಣೆ ತರಲು ವಿಧಾನಗಳನ್ನು ಕೂಡ ಗೊತ್ತುಪಡಿಸುತ್ತದೆ. 14ಎ ಹೊಸ ಪ್ರಕರಣದ ಸೇರ್ಪಡೆಯ ಪರಿಣಾಮವಾಗಿ ಅಧಿನಿಯಮದ 24 ಮತ್ತು 74ನೇ ಪ್ರಕರಣಗಳಲ್ಲಿ ಕೆಲವು ಸಣ್ಣಪುಟ್ಟ ಬದಲಾವಣೆಗಳನ್ನು ಮಾಡುವುದು ಕೂಡ ಅವಶ್ಯವೆಂದು ಪರಿಗಣಿಸಲಾಗಿದೆ. ಅಧಿನಿಯಮವನ್ನು ಸೂಕ್ತವಾಗಿ ಜಾರಿಗೆ ತರಲು, ಯೋಜನಾ ಪ್ರಾಧಿಕಾರದ ಕೆಲವು ನಿರ್ಣಯಗಳನ್ನು ರದ್ದುಗೊಳಿಸಲು ಹಾಗೂ ಕೆಲವು ಸಂದರ್ಭಗಳಲ್ಲಿ ಲೈಸೆನ್ಸುಗಳು ಮತ್ತು ಅನುಮತಿಗಳು, ಮುಂತಾದವುಗಳನ್ನು ಅಮಾನತ್ತುಗೊಳಿಸಲು ಹಾಗೂ ರದ್ದುಗೊಳಿಸಲು ಯೋಜನಾ ಪ್ರಾಧಿಕಾರಕ್ಕೆ ಅಧಿಕಾರ ನೀಡುವುದಕ್ಕಾಗಿ ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡಲು 76, 'ಎನ್' ಮತ್ತು 'ಓ' ಹೊಸ ಪ್ರಕರಣಗಳನ್ನು ಸೇರ್ಪಡೆ ಮಾಡಲಾಗಿದೆ.

4. ಇತರೆ ಕೆಲವು ಪ್ರಾಸಂಗಿಕ ಮತ್ತು ಆನುಷಂಗಿಕ ಉಪಬಂಧಗಳನ್ನು ಸಹ ರಚಿಸಲಾಗಿದೆ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ–IV 2ಎ, ದಿನಾಂಕ 20ನೇ ಮಾರ್ಚ್ 1991ರಲ್ಲಿ, ಪುಟ 109ರಲ್ಲಿ ಸಂಖ್ಯೆ 120 ರಲ್ಲಿ ಪ್ರಕಟಿಸಲಾಗಿದೆ).

## IX

**ತಿದ್ದುಪಡಿ ಅಧಿನಿಯಮ ಸಂಖ್ಯೆ 1994ರ 8.–** ಸಮಗ್ರ ಅಭಿವೃದ್ಧಿ ಯೋಜನೆ ಮತ್ತು ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961ರ ಸಂಬಂಧ ಆಕ್ಷೇಪಣೆಗಳನ್ನು ಸಲ್ಲಿಸಲು ಈಗ ಇರುವ ಅವಧಿಯನ್ನು "ಮೂರು ತಿಂಗಳುಗಳಿಂದ" "ಒಂದು ತಿಂಗಳಿಗೆ" ಇಳಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ–IV 2ಎ, ದಿನಾಂಕ 17ನೇ ಜನವರಿ 1994ರಲ್ಲಿ, ಪುಟ 6ರಲ್ಲಿ ಸಂಖ್ಯೆ 32 ರಲ್ಲಿ ಪ್ರಕಟಿಸಲಾಗಿದೆ).

## X

**ತಿದ್ದುಪಡಿ ಅಧಿನಿಯಮ ಸಂಖ್ಯೆ 2003ರ 18.–** ಹಂಪೆಯ ಸಾಂಸ್ಕೃತಿಕ ಪರಂಪರೆಯನ್ನು ಅದರ ಎಲ್ಲಾ ಪುರಾತತ್ವ ಅವಶೇಷಗಳ ಮತ್ತು ನೈಸರ್ಗಿಕ ಪರಿಸರಗಳ ಸಹಿತ ಸಂರಕ್ಷಿಸುವುದಕ್ಕಾಗಿ, ಹಂಪಿ ವಿಶ್ವ ಪರಂಪರೆ ಪ್ರದೇಶದ ಸುಸ್ಥಿರ ಅಭಿವೃದ್ಧಿಯನ್ನು ಸುನಿಶ್ಚಿತಪಡಿಸಿಕೊಳ್ಳುವುದಕ್ಕಾಗಿ, ಪ್ರದೇಶ ಆಡಳಿತ ಪ್ರಾಧಿಕಾರವು,–

(i) ಪರಂಪರೆ ಪ್ರದೇಶದ ಅನಿಯಂತ್ರಿತ ಅಭಿವೃದ್ಧಿಯನ್ನು ಹಾಗೂ ಆ ಪ್ರದೇಶದ ವಾಣಿಜ್ಯದ ಬಳಕೆಯನ್ನು ತಡೆಯಲು;

(ii) ಅಭಿವೃದ್ಧಿ ಯೋಜನೆಯಲ್ಲಿ ಹೇಳಲಾದ ಕಾಮಗಾರಿಗಳು ಕಾರ್ಯಗತವಾಗುವಂತೆ ಮಾಡಲು;

(iii) ಸ್ಥಳೀಯ ಪ್ರಾಧಿಕಾರಗಳ, ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಅಧಿನಿಯಮ, 1987ರ ಮೇರೆಗೆ ರಚಿತವಾದ ನಗರಾಭಿವೃದ್ಧಿ ಪ್ರಾಧಿಕಾರಗಳ, ಕರ್ನಾಟಕ ನಗರ ನೀರು ಸರಬರಾಜು ಮತ್ತು ಗ್ರಾಮಸಾರ ಮಂಡಳಿಯ, ಕೊಳಚೆ ನಿರ್ಮೂಲನಾ ಮಂಡಳಿಯ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮದ, ಕರ್ನಾಟಕ ಕೈಗಾರಿಕಾ ಪ್ರದೇಶ ಅಭಿವೃದ್ಧಿ ಮಂಡಲಿಯ, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ, ಮತ್ತು ಪರಂಪರೆಯ ಪ್ರದೇಶದಲ್ಲಿ ಅಭಿವೃದ್ಧಿ ಚಟುವಟಿಕೆಗಳಿಗೆ ಸಂಬಂಧಪಟ್ಟಿರುವಂಥ ಇತರ ಸಂಸ್ಥೆಗಳ ಚಟುವಟಿಕೆಗಳಲ್ಲಿ ಸಮನ್ವಯ ತರಲು;

(iv) ಪರಂಪರೆ ಪ್ರದೇಶದೊಳಗಿರುವ ಸಾರ್ವಜನಿಕ ಸ್ವತ್ತನ್ನು ರಕ್ಷಿಸಲು ಸೂಕ್ತ ಕ್ರಮ ಕೈಗೊಳ್ಳಲು;

(v) ಹಂಪಿ ವಿಶ್ವ ಪರಂಪರೆ ನಿವೇಶನದ ಪುರಾತತ್ವ, ಐತಿಹಾಸಿಕ ಮತ್ತು ಪರಿಸರ ಮೌಲ್ಯಗಳನ್ನು ತಿಳಿದುಕೊಳ್ಳುವುದಕ್ಕೆ ಉತ್ತೇಜನ ನೀಡಲು ಮತ್ತು ಅವುಗಳ ಬಗ್ಗೆ ಸೂಕ್ತ ಸಂಶೋಧನೆ ಕೈಗೊಳ್ಳುವುದಕ್ಕೆ ಪ್ರೋತ್ಸಾಹ ನೀಡಲು;

ಮತ್ತು ಪ್ರಾಧಿಕಾರ ನಿಧಿಯನ್ನು ಸ್ಥಾಪಿಸುವುದಕ್ಕಾಗಿ ಮತ್ತು ಅದಕ್ಕೆ ಪ್ರಾಸಂಗಿಕವಾದ ವಿಷಯಗಳಿಗಾಗಿ, ಉಪಬಂಧ ಕಲ್ಪಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಅಲ್ಲದೆ, ತತ್ಪರಿಣಾಮವಾಗಿ ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961ನ್ನು ಮತ್ತು ಕರ್ನಾಟಕ ಸಾರ್ವಜನಿಕ ಆವರಣಗಳ (ಅನಧಿಕೃತ ಅಧಿಭೋಗದಾರರನ್ನು ಹೊರಹಾಕುವ) ಅಧಿನಿಯಮ, 1974ನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಸಹ ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ–IV 2ಎ, ದಿನಾಂಕ 4ನೇ ಜೂನ್ 2003ರಲ್ಲಿ, ಪುಟ 10ರಲ್ಲಿ ಸಂಖ್ಯೆ 589 ರಲ್ಲಿ ಪ್ರಕಟಿಸಲಾಗಿದೆ.)

## XI

**ತಿದ್ದುಪಡಿ ಅಧಿನಿಯಮ ಸಂಖ್ಯೆ 2004ರ 23.–** ಈ ಮುಂದಿನವುಗಳಿಗೆ ಉಪಬಂಧ ಕಲ್ಪಿಸುವುದಕ್ಕಾಗಿ ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961ನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ, ಎಂದರೆ:–

(1) ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ಕ್ಕೆ ತಿದ್ದುಪಡಿಗಳನ್ನು ತಂದಿರುವುದರಿಂದ "ಅಧಿಸೂಚಿತ ಪ್ರದೇಶ ಸಮಿತಿ, ನೈರ್ಮಲ್ಯ ಮಂಡಳಿಗಳು" ಅಸ್ತಿತ್ವದಲ್ಲಿಲ್ಲದಿರುವುದರಿಂದ ಈ ಪದಗಳನ್ನು ಬಿಟ್ಟುಬಿಡುವುದು.

(2) ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ರಲ್ಲಿ ಮಾಡಿದ ಬದಲಾವಣೆಗಳಿಗೆ ಅನುಗುಣವಾಗಿ "ಮಂಡಲ ಪಂಚಾಯಿತಿ" ಎಂಬ ಪದಗಳಿಗೆ ಬದಲಾಗಿ "ಗ್ರಾಮ ಪಂಚಾಯತಿ" ಎಂಬ ಪದಗಳನ್ನು ಸೇರಿಸುವುದು.

(3) ಯಾವುದೇ ಕಾನೂನಿನ ಮೂಲಕ ಅಥವಾ ಅದರ ಮೇರೆಗೆ ರಚಿತವಾದ ಮತ್ತು ರಾಜ್ಯ ಸರ್ಕಾರದ ಒಡೆತನದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ಯಾವುದೇ ಮಂಡಳಿಯನ್ನು, ಪ್ರಾಧಿಕಾರವನ್ನು ಅಥವಾ ಸಂಸ್ಥೆಯನ್ನು, ಭೂಬಳಕೆಯ ಬದಲಾವಣೆಗಾಗಿ ಅಥವಾ ಭೂ ಅಭಿವೃದ್ಧಿಗಾಗಿ ಅನುಮತಿಯನ್ನು ಪಡೆಯುವುದಕ್ಕಾಗಿ ಶುಲ್ಕವನ್ನು ಸಂದಾಯ ಮಾಡುವುದರಿಂದ ವಿನಾಯಿತಿಗೊಳಿಸಲು ರಾಜ್ಯಸರ್ಕಾರಕ್ಕೆ ಅಧಿಕಾರ ನೀಡುವುದು.

(4) ಯೋಜನಾ ಪ್ರಾಧಿಕಾರಕ್ಕೆ,–

(i) ರಸ್ತೆ ಅಗಲೀಕರಣದ ಉದ್ದೇಶಗಳಿಗಾಗಿ ಅಥವಾ ಹೊಸ ರಸ್ತೆಗಳ ನಿರ್ಮಾಣಕ್ಕಾಗಿ ಅಂಥ ಭೂಮಿಗಳು ಅಗತ್ಯವಾಗಿರುವಾಗಲೆಲ್ಲಾ ಉಚಿತವಾಗಿ ಭೂಮಿಯನ್ನು ಹಸ್ತಾಂತರಿಸುವುದಕ್ಕಾಗಿ 100 ಕ್ಕೆ ನೂರರಷ್ಟು ಹೆಚ್ಚುವರಿ ನೆಲ ಪ್ರದೇಶ ಪ್ರಮಾಣಕ್ಕೆ ಅನುಮತಿಸಲು;

(ii) ಸ್ಟಾರ್ ಹೋಟೆಲುಗಳ ಸಂದರ್ಭದಲ್ಲಿ, ಅನುಮತಿಸಲಾದ ನೆಲ ಪ್ರದೇಶ ಪ್ರಮಾಣಕ್ಕೆ ಸಮನಾದ ಭೂಮಿಯ ಮಾರುಕಟ್ಟೆ ಮೌಲ್ಯದ ಕನಿಷ್ಠ ಶೇಕಡಾ ಐವತ್ತರಷ್ಟನ್ನು ಮತ್ತು ಗರಿಷ್ಠ ಶೇಕಡಾ 100 ರಷ್ಟನ್ನು ಸಂದಾಯ ಮಾಡುವುದಕ್ಕೆ ಒಳಪಟ್ಟು, ಶೇಕಡಾ 100 ರಷ್ಟರವರೆಗೆ ಹೆಚ್ಚುವರಿ ನೆಲ ಪ್ರದೇಶ ಪ್ರಮಾಣಕ್ಕೆ ಅನುಮತಿಸಲು

– ಅಧಿಕಾರ ನೀಡುವುದು.

(5) ಸಂದಿಗ್ಧತೆಯನ್ನು ಪರಿಹರಿಸುವ ಸಲುವಾಗಿ ಫೀಜನ್ನು ವಿಧಿಸುವುದಕ್ಕೆ ಸಂಬಂಧಪಟ್ಟ ಉಪಬಂಧವನ್ನು ಹೊಸದಾಗಿ ರಚಿಸುವುದು.

(6) ಮಂಜೂರಾದ ನಕ್ಷೆಯನ್ನು ಉಲ್ಲಂಘಿಸಿ ನಿರ್ಮಿಸಿದ ಕಟ್ಟಡಗಳನ್ನು, ಅಂಥ ಉಲ್ಲಂಘಿತ ಪ್ರದೇಶದ ಮಾರುಕಟ್ಟೆ ಮೌಲ್ಯಕ್ಕಿಂತ ಹೆಚ್ಚಾಗದಂತೆ ಗೊತ್ತುಪಡಿಸಬಹುದಾದ ದಂಡವನ್ನು ಸಂದಾಯ ಮಾಡುವುದಕ್ಕೆ ಒಳಪಟ್ಟು ಸಕ್ರಮಗೊಳಿಸುವುದಕ್ಕಾಗಿ ಉಪಬಂಧ ಕಲ್ಪಿಸುವುದು.

(7) ಭೂ ಅಥವಾ ಕಟ್ಟಡದ ಅಭಿವೃದ್ಧಿಗಾಗಿ ಅನುಮತಿ ನೀಡುವುದಕ್ಕಾಗಿ, ನೀರು ಸರಬರಾಜು, ವರ್ತುಲ ರಸ್ತೆ ನಿರ್ಮಾಣ, ಕೊಳಗೇರಿ ಸುಧಾರಣೆ ಮತ್ತು ತ್ವರಿತ ಸಮೂಹ ಸಾರಿಗೆ ವ್ಯವಸ್ಥೆಗಾಗಿ ಅಂಥ ಭೂಮಿಯ ಅಥವಾ ಕಟ್ಟಡದ ಒಡೆಯನಿಂದ ಭೂಮಿಯ ಅಥವಾ ಕಟ್ಟಡದ ಮಾರುಕಟ್ಟೆ ಮೌಲ್ಯದ ಹತ್ತನೇ ಒಂದು ಭಾಗವನ್ನು ಮೀರದಂಥ ದರದಲ್ಲಿ 19–10–1992 ರಿಂದ ಜಾರಿಗೆ ಬರುವಂತೆ ಮೇಲ್ತೆರಿಗೆಯನ್ನು ಅಥವಾ ಉಪಕರವನ್ನು ವಿಧಿಸುವುದಕ್ಕಾಗಿ ಮತ್ತು ಸಂಗ್ರಹಿಸುವುದಕ್ಕಾಗಿ ಉಪಬಂಧ ಕಲ್ಪಿಸುವುದು.

(8) ಮಂಜೂರಾದ ನಕ್ಷೆಯನ್ನು ಬದಲಾಯಿಸಿ ನಿರ್ಮಿಸಲಾದ ಆದರೆ, 76 ಎಫ್‌ಎಫ್ ಪ್ರಕರಣದ ಅಡಿಯಲ್ಲಿ ಸಕ್ರಮಗೊಳಿಸಿರದ ಅಥವಾ ಅನುಮತಿಯನ್ನು ಪಡೆಯದೆ ಅಥವಾ ಯಾವುದೇ ಪ್ರಾಧಿಕಾರವು ಹೊರಡಿಸಿದ ಯಾವುದೇ ಆದೇಶ ಅಥವಾ ನೀಡಿದ ಯಾವುದೇ ನಿರ್ದೇಶನವನ್ನು ಉಲ್ಲಂಘಿಸಿ ನಿರ್ಮಿಸಲಾದ, ಕಟ್ಟಡವನ್ನು ಅಥವಾ ಅದರ ಭಾಗವನ್ನು, ಅದನ್ನು ಕೆಡವುದು ಕಾರ್ಯಸಾಧ್ಯವಲ್ಲವೆಂದು ಅಥವಾ ಹಾಗೆ ಮಾಡುವಂತೆ ಸೂಚಿಸುವುದು ಸಾಧ್ಯವಲ್ಲವೆಂದು ಯೋಜನಾ ಪ್ರಾಧಿಕಾರವು ಅಭಿಪ್ರಾಯಪಟ್ಟರೆ ಮತ್ತು ಅಂಥ ಕಟ್ಟಡದ ಅಥವಾ ಅದರ ಭಾಗದ ಪ್ರಸಕ್ತ ಮೌಲ್ಯದ ಎರಡರಷ್ಟಕ್ಕೆ ಸಮನಾದ ಮೊತ್ತವನ್ನು ದಂಡವೆಂದು ಸಂದಾಯ ಮಾಡಲು ಮಾಲೀಕನು ಒಪ್ಪದಿದ್ದರೆ ರಾಜ್ಯ ಸರ್ಕಾರಕ್ಕೆ, ಮುಟ್ಟುಗೋಲು ಹಾಕಿಕೊಳ್ಳುವುದಕ್ಕೆ ಉಪಬಂಧ ಕಲ್ಪಿಸುವುದು.

(9) ಬೇರೆ ಬೇರೆ ಅಭಿವೃದ್ಧಿ ಪ್ರಾಧಿಕಾರಗಳು, ಯೋಜನಾ ಪ್ರಾಧಿಕಾರಗಳು ಮತ್ತು ಸ್ಥಳೀಯ ಪ್ರಾಧಿಕಾರಗಳು 19–10–1992ರಿಂದ ಈಗಾಗಲೇ ಸಂಗ್ರಹಿಸಿದ ಮೇಲೆ ಹೇಳಲಾದ ಉಪಕರವನ್ನು ಮತ್ತು ಮೇಲ್ತೆರಿಗೆಯನ್ನು ಸಂಗ್ರಹಿಸಿರುವುದನ್ನು ಸಿಂಧುಗೊಳಿಸುವುಕ್ಕೆ ಉಪಬಂಧ ಕಲ್ಪಿಸುವುದು.

ಆದ್ದರಿಂದ ಈ ವಿಧೇಯಕ.

(ವಿಧಾನ ಪರಿಷತ್ತು ವಿಧೇಯಕ ಸಂಖ್ಯೆ 1998ರ 10)

(ಭಾರತ ಸಂವಿಧಾನದ ಏಳನೇ ಅನುಸೂಚಿಯ ಪಟ್ಟಿ IIರ ನಮೂದುಗಳು 5 ಮತ್ತು 18 ಹಾಗೂ ಪಟ್ಟಿ IIIರ ನಮೂದು 20)

## XII

**ತಿದ್ದುಪಡಿ ಅಧಿನಿಯಮ ಸಂಖ್ಯೆ 2005ರ 1.–** ಈ ಮುಂದಿನವುಗಳಿಗಾಗಿ ಉಪಬಂಧ ಕಲ್ಪಿಸಲು ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961ನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

**(i)** ಪರಂಪರೆಯ ಕಟ್ಟಡದ ಮತ್ತು ಪರಂಪರೆಯ ಎಲ್ಲೆಕಟ್ಟಿನ ಪರಿಭಾಷೆ ಮತ್ತು ಅವುಗಳ ಸಂರಕ್ಷಣೆಗಾಗಿ ವಿನಿಯಮನವನ್ನು ರಚಿಸುವುದು;

**(ii)** ಕಾರ್ಯವಿಧಾನವನ್ನು ಸರಳೀಕರಿಸಲು ಸಮಗ್ರ ಅಭಿವೃದ್ಧಿ ಯೋಜನೆ ಮತ್ತು ಸ್ಥೂಲ ಅಭಿವೃದ್ಧಿ ಯೋಜನೆಯ ಬದಲಿಗೆ ಬೃಹತ್ ಯೋಜನೆ;

**(iii)** ವಾಣಿಜ್ಯ ಅಥವಾ ಕೈಗಾರಿಕೆಯಿಂದ ವಸತಿಗೆ ಮತ್ತು ಕೈಗಾರಿಕೆಯಿಂದ ವಾಣಿಜ್ಯಕ್ಕೆ ಭೂ ಬಳಕೆಯ ಬದಲಾವಣೆ ಆಗಿದೆಯೆಂದು ಭಾವಿಸುವುದು;

ಕೆಲವು ಇತರ ಆನುಷಂಗಿಕ ಬದಲಾವಣೆಗಳನ್ನು ಮಾಡಲಾಗಿದೆ.

ಆದ್ದರಿಂದ ಈ ವಿಧೇಯಕ.

## XIII

**ತಿದ್ದುಪಡಿ ಅಧಿನಿಯಮ 2007ರ 1.–** ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961ನ್ನು ಕರ್ನಾಟಕ ಪೌರಸಭಾ ನಿಗಮಗಳ ಅಧಿನಿಯಮ, 1976ನ್ನು ಮತ್ತು ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ನ್ನು ಕೆಳಕಂಡ ರೀತಿಯಲ್ಲಿ ತಿದ್ದುಪಡಿ ಮಾಡುವ ಮೂಲಕ ಕೆಲವು ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸಲು ಮತ್ತು ಅದಕ್ಕಾಗಿ ಮಾನದಂಡಗಳನ್ನು ಪರಿಭಾಷಿಸಲು ಉಪಬಂಧಿಸುವುದು ಸಾರ್ವಜನಿಕ ಹಿತದೃಷ್ಟಿಯಿಂದ ಅವಶ್ಯಕ ಮತ್ತು ವಿಹಿತವೆಂದು ಪರಿಗಣಿಸಲಾಗಿದೆ, ಎಂದರೆ,–

(1) ಗೊತ್ತುಪಡಿಸಿದ ಶುಲ್ಕದ ಸಂದಾಯಕ್ಕೆ ಒಳಪಟ್ಟು,–

(ಎ) ತಿದ್ದುಪಡಿ ಅಧಿನಿಯಮವನ್ನು ಅಂಗೀಕರಿಸಿದ ದಿನಾಂಕದಂದು ಇದ್ದಂತಹ ಎಲ್ಲ ಅನಧಿಕೃತ ಕಟ್ಟಡಗಳನ್ನು

(ಬಿ) ಭೂ ಬಳಕೆದಾರನು ಮಾಡಿದ ಬದಲಾವಣೆಯ ಎಲ್ಲ ಉಲ್ಲಂಘನೆಗಳನ್ನು

(ಸಿ) ಕಂದಾಯ ನಿವೇಶನಗಳಲ್ಲಿ ನಿರ್ಮಿಸಿದ ಎಲ್ಲ ಕಟ್ಟಡಗಳನ್ನು

ಆದರೆ,–

(i) ವರ್ತುಲ ರಸ್ತೆಯ ಹೆದ್ದಾರಿಗಳ ಪಂಕ್ತೀಕರಣಕ್ಕೆ

(ii) ಸರ್ಕಾರ, ಸ್ಥಳೀಯ ಪ್ರಾಧಿಕಾರಗಳು ಮತ್ತು ಅಭಿವೃದ್ಧಿ ಪ್ರಾಧಿಕಾರಗಳು ಮತ್ತು ಉದ್ಯಾನಗಳು ಮತ್ತು ಬಯಲು ಸ್ಥಳಗಳಿಗೆ

(iii) ವಾಹನ ನಿಲುಗಡೆ ಸ್ಥಳ ಎಂದು ಗೊತ್ತುಪಡಿಸಿದ ನೆಲಮಾಳಿಗೆಗೆ

– ಸಂಬಂಧಿಸಿದ ಅಭಿವೃದ್ಧಿಯನ್ನು ಹೊರತುಪಡಿಸಿ ಸಕ್ರಮಗೊಳಿಸುವುದು.

(2) ಅನುಮತಿಸಿದ ವಿವಿಧ ಬಗೆಯ ಉಲ್ಲಂಘನೆಗಳಿಗೆ ಶುಲ್ಕವನ್ನು ಗೊತ್ತುಪಡಿಸುವುದು.

(3) ಇತರ ಆನುಷಂಗಿಕ ಮತ್ತು ಪ್ರಾಸಂಗಿಕ ವಿಷಯಗಳಿಗಾಗಿ ಉಪಬಂಧಿಸುವುದು.

ಆದ್ದರಿಂದ ಈ ವಿಧೇಯಕ.

(ವಿಧಾನ ಪರಿಷತ್ ವಿಧೇಯಕ ಸಂಖ್ಯೆ 2004ರ 11)

(ಭಾರತ ಸಂವಿಧಾನದ ಏಳನೇ ಅನುಸೂಚಿಯ IIನೇ ಪಟ್ಟಿಯ 5 ಮತ್ತು 18ನೇ ನಮೂದುಗಳು ಹಾಗೂ IIIನೇ ಪಟ್ಟಿಯ 20ನೇ ನಮೂದು).

## XIV

**ತಿದ್ದುಪಡಿ ಅಧಿನಿಯಮ ಸಂಖ್ಯೆ 2007ರ 2.–** ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961ನ್ನು ಸರ್ಕಾರವು ಕಾಲಕಾಲಕ್ಕೆ ಅಧಿಸೂಚಿಸಿದ ಯಾವುದೇ ಸಾರ್ವಜನಿಕ ಉದ್ದೇಶಕ್ಕಾಗಿ ಉಚಿತವಾಗಿ ತಮ್ಮ ಭೂಮಿಗಳನ್ನು ಅಥವಾ ನಿವೇಶನಗಳನ್ನು ಬಿಟ್ಟುಕೊಟ್ಟ ಭೂ ಮಾಲೀಕರಿಗೆ ಅಭಿವೃದ್ಧಿ ಹಕ್ಕುಗಳ (ಟಿಡಿಆರ್) ವರ್ಗಾವಣೆಯ ಪ್ರಯೋಜನವನ್ನು ಒದಗಿಸಲು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ವಿಧಾನ ಪರಿಷತ್ ವಿಧೇಯಕ ಸಂಖ್ಯೆ 2004ರ 9)

(ಭಾರತ ಸಂವಿಧಾನದ ಏಳನೇ ಅನುಸೂಚಿಯ IIನೇ ಪಟ್ಟಿಯ ನಮೂದು 5)

## XV

2012ರ **ತಿದ್ದುಪಡಿ ಮಾಡುವ ಅಧಿನಿಯಮ ಸಂಖ್ಯೆ 06.–** 2009ರ ಅಕ್ಟೋಬರ್ 3ನೇ ದಿನದಿಂದ ಜಾರಿಗೆ ಬರುವಂತೆ ಸ್ಥಳೀಯ ಯೋಜನಾ ಪ್ರದೇಶಗಳಲ್ಲಿ ಕೆರೆಗಳ ಪುನಃಶ್ಚೇತನಕ್ಕಾಗಿ ಮತ್ತು ಅಭಿವೃದ್ಧಿಗಾಗಿ ಒಂದು ಎಕರೆಗೆ 1.00 ಲಕ್ಷ ರೂಪಾಯಿಗಳ ಶುಲ್ಕವನ್ನು ವಿಧಿಸಲು ಮತ್ತು ಆ ಹಣವನ್ನು ಖಾಸಗಿ ಅಭಿವೃದ್ಧಿದಾರರಿಂದ ಸಂಗ್ರಹಿಸಲು ಹಾಗೂ 2009ರ ಅಕ್ಟೋಬರ್ 3ರ, 2010ರ ಮೇ 4ರ ಮತ್ತು 2010ರ ಸೆಪ್ಟೆಂಬರ್ 29ರ ಸರ್ಕಾರದ ಪತ್ರಗಳಿಗೆ ಅನುಸಾರವಾಗಿ ಅಂಥ ಶುಲ್ಕದ ಸಂಗ್ರಹಣೆಯನ್ನು ಸಿಂಧುಗೊಳಿಸುವುದಕ್ಕಾಗಿ ಉಪಬಂಧವನ್ನು ಕಲ್ಪಿಸಲು ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961ಕ್ಕೆ (1963ರ ಕರ್ನಾಟಕ ಅಧಿನಿಯಮ ಸಂಖ್ಯೆ 11) ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(2011ರ ಎಲ್.ಎ. ವಿಧೇಯಕ ಸಂ: 36, ಕಡತ ಸಂ. ಸಂವ್ಯಶಾಇ 41 ಶಾಸನ 2011)

(ಭಾರತ ಸಂವಿಧಾನದ ಏಳನೇ ಅನುಸೂಚಿಯ ಪಟ್ಟಿ IIರ 18ನೇ ನಮೂದು)

# [1][ಕರ್ನಾಟಕ][1] ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961

[1][ಕರ್ನಾಟಕ ಅಧಿನಿಯಮ][1] ಸಂಖ್ಯೆ 1963ರ 11

(1963ರ ಮಾರ್ಚ್ ಇಪ್ಪತ್ತೆಂಟನೇ ದಿವಸದಂದು [1][ಕರ್ನಾಟಕ ರಾಜ್ಯಪತ್ರದಲ್ಲಿ][1] ಮೊದಲು ಪ್ರಕಟವಾಯಿತು).

(1963ರ ಮಾರ್ಚ್ ಎಂಟನೇ ದಿವಸದಂದು ರಾಷ್ಟ್ರಪತಿಯ ಸಮ್ಮತಿ ಪಡೆಯಿತು)

(ಕರ್ನಾಟಕ ಅಧಿನಿಯಮಗಳು – 1964ರ 14, 1968ರ 2, 1976ರ 12, 1985ರ 39, 1987ರ 34, 1991ರ 2, 1991ರ 17, 1994ರ 8, 2003ರ 18, 2004ರ 23, 2005ರ 1, 2007ರ 1 ಮತ್ತು 2007ರ 2 – ಇವುಗಳ ಮೂಲಕ ತಿದ್ದುಪಡಿಯಾದಂತೆ).

**[1][ಕರ್ನಾಟಕ ರಾಜ್ಯದಲ್ಲಿ][1] ಭೂಬಳಕೆ ಮತ್ತು ಅಭಿವೃದ್ಧಿಯ ಯೋಜಿತ ಬೆಳವಣಿಗೆಯ ಬಗ್ಗೆ ವಿನಿಯಮಿಸುವುದಕ್ಕಾಗಿ ಮತ್ತು ಪಟ್ಟಣದ ಯೋಜಿತ ಕಾರ್ಯಯೋಜನೆಗಳನ್ನು ಸಿದ್ಧಪಡಿಸುವುದಕ್ಕೆ ಮತ್ತು ಅದನ್ನು ಕಾರ್ಯಗತಗೊಳಿಸುವುದಕ್ಕೆ ಉಪಬಂಧಿಸುವ ಅಧಿನಿಯಮ.**

(i) ರಾಜ್ಯದ ಜನರಿಗೆ ಸಂಪೂರ್ಣ ಪೌರ ಮತ್ತು ಸಾಮಾಜಿಕ ಸೌಕರ್ಯಗಳನ್ನು ಒದಗಿಸುವ ದೃಷ್ಟಿಯಿಂದ [1][ಕರ್ನಾಟಕ ರಾಜ್ಯದಲ್ಲಿನ][1] ನಗರ ಹಾಗೂ ಗ್ರಾಮೀಣ ಪ್ರದೇಶಗಳ ಯೋಜನೆ ಮತ್ತು ಮರುಯೋಜನೆಗಳಿಗೆ ಅನುಕೂಲಕರ ಪರಿಸ್ಥಿತಿಗಳನ್ನು ಸೃಜಿಸುವುದು;

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973ರ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

(ii) ಭೂಮಿಯ ಸಟ್ಟಾ ವ್ಯಾಪಾರದ ಮತ್ತು ಭೂವ್ಯವಹಾರದಲ್ಲಿ ಲಾಭ ಬಡುಕತನದ ಕಾರಣದಿಂದಾಗಿ ಭೂಮಿಯ ಅನಿಯಂತ್ರಿತ ಬೆಳವಣಿಗೆಯನ್ನು ತಡೆಯುವುದು;

(iii) ಈಗಿರುವ ಮನರಂಜನ ಸೌಲಭ್ಯಗಳನ್ನು ಮತ್ತು ಭೂಮಿಯ ಸಮತೋಲಿತ ಉಪಯೋಗಕ್ಕೆ ಸಹಾಯಕವಾಗುವ ಇತರ ಸೌಕರ್ಯಗಳನ್ನು ಸಂರಕ್ಷಿಸುವುದು ಮತ್ತು ಸುಧಾರಿಸುವುದು; ಮತ್ತು

(iv) ಪರಿಸರ ಆರೋಗ್ಯ ಮತ್ತು ನೈರ್ಮಲ್ಯದ ಅಪೇಕ್ಷಿತ ಗುಣಮಟ್ಟಗಳನ್ನು ಖಚಿತಪಡಿಸಿಕೊಳ್ಳುವ ದೃಷ್ಟಿಯಿಂದ ರಾಜ್ಯದಲ್ಲಿ ಜನನಿಬಿಡ ಪ್ರದೇಶಗಳ ಮುಂದಿನ ಬೆಳವಣಿಗೆಯ ಬಗ್ಗೆ ನಿರ್ದೇಶನ ನೀಡುವುದು ಮತ್ತು ಕೈಗಾರಿಕೆ ಮತ್ತು ವಾಣಿಜ್ಯವು ವ್ಯವಸ್ಥಿತವಾಗಿ ಬೆಳವಣಿಗೆಯಾಗಲು ಸೌಲಭ್ಯಗಳನ್ನು ಸೃಜಿಸುವುದು, ಆ ಮೂಲಕ ರಾಜ್ಯದಲ್ಲಿ ಸಾಮಾನ್ಯವಾಗಿ ಜೀವನ ಮಟ್ಟಗಳನ್ನು ಸಂವರ್ಧಿಸುವುದು

– ಅವಶ್ಯ ಮತ್ತು ವಿಹಿತವಾಗಿರುವುದರಿಂದ;

ಮತ್ತು ಪಟ್ಟಣದ ಯೋಜಿತ ಕಾರ್ಯಯೋಜನೆಗಳನ್ನು ಸರಿಯಾದ ರೀತಿಯಲ್ಲಿ ಮಾಡಲಾಗಿದೆ ಎಂಬುದನ್ನು ಮತ್ತು ಅವುಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲಾಗಿದೆಯೆಂಬುದನ್ನು ಖಚಿತಪಡಿಸಿಕೊಳ್ಳುವ ದೃಷ್ಟಿಯಿಂದ ಸ್ಥಳೀಯ ಪ್ರಾಧಿಕಾರವು, ತನ್ನ ಅಧಿಕಾರ ವ್ಯಾಪ್ತಿಯೊಳಗಿರುವ ಸಮಗ್ರ ಪ್ರದೇಶಕ್ಕಾಗಿ ಅಭಿವೃದ್ಧಿ ಯೋಜನೆಯನ್ನು ಸಿದ್ಧಪಡಿಸತಕ್ಕದೆಂದು ಉಪಬಂಧಿಸುವುದು ಅವಶ್ಯವಾಗಿರುವುದರಿಂದ;

ಮತ್ತು ಹಿಂದೆ ಹೇಳಿದ ಮತ್ತು ಇದರಲ್ಲಿ ಇನ್ನು ಮುಂದೆ ಹೇಳಿರುವ ಇತರ ಉದ್ದೇಶಗಳಿಗಾಗಿ ಪಟ್ಟಣ ಯೋಜನೆಗೆ ಸಂಬಂಧಪಟ್ಟ ಕಾನೂನನ್ನು ಕ್ರೋಡೀಕರಿಸುವುದು ಮತ್ತು ತಿದ್ದುಪಡಿ ಮಾಡುವುದು ಅವಶ್ಯಕ ಮತ್ತು ವಿಹಿತವಾಗಿರುವುದರಿಂದ;

ಭಾರತ ಗಣರಾಜ್ಯದ ಹನ್ನೆರಡನೇ ವರ್ಷದಲ್ಲಿ [1][ಕರ್ನಾಟಕ ರಾಜ್ಯ][1] ವಿಧಾನ ಮಂಡಲದಿಂದ ಈ ಕೆಳಕಂಡಂತೆ ಅಧಿನಿಯಮಿತವಾಗತಕ್ಕದ್ದು:–

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973ರ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

## ಅಧ್ಯಾಯ – I

### ಪ್ರಾರಂಭಿಕ

1. **ಚಿಕ್ಕ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ:–** (1) ಈ ಅಧಿನಿಯಮವನ್ನು [1][ಕರ್ನಾಟಕ][1] ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961 ಎಂದು ಕರೆಯತಕ್ಕದ್ದು.

(2) ಇದು, ಇಡೀ [1][ಕರ್ನಾಟಕ ರಾಜ್ಯಕ್ಕೆ][1] ವ್ಯಾಪ್ತವಾಗತಕ್ಕದ್ದು.

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973ರ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

(3) ಇದು, ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ, ಗೊತ್ತುಪಡಿಸಬಹುದಾದಂಥ [1][ದಿನಾಂಕದಂದು][1] ಜಾರಿಗೆ ಬರತಕ್ಕದ್ದು.

1. ಈ ಅಧಿನಿಯಮವು ಅಧಿಸೂಚನೆ ಸಂಖ್ಯೆ ಪಿಎಲ್ಎಂ 60 ಎಂಎನ್‌ಪಿ 63, ದಿನಾಂಕ 31.12.1964ರ ಮೂಲಕ 1965ರ ಜನವರಿ 15 ರಂದು ಜಾರಿಗೆ ಬಂದಿದೆ. ಅಧಿಸೂಚನೆಯ ಪಾಠವು ಅಧಿನಿಯಮದ ಕೊನೆಯಲ್ಲಿದೆ.

2. **ಪರಿಭಾಷೆಗಳು:–** ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

[1][(1) "ಕೃಷಿ" ಎಂಬುದು ತೋಟಗಾರಿಕೆ, ಬೇಸಾಯ, ಬೆಳೆಗಳು, ಹಣ್ಣುಗಳು, ತರಕಾರಿಗಳು, ಹೂಗಳು, ಹುಲ್ಲು, ಮೇವು, ಮರಗಳನ್ನು ಬೆಳೆಸುವುದು ಅಥವಾ ಯಾವುದೇ ಬಗೆಯ ಭೂಸಾಗುವಳಿ, ದನಕರು, ಕುದುರೆಗಳು, ಕತ್ತೆಗಳು, ಹೇಸರಗತ್ತೆಗಳು, ಹಂದಿಗಳು, ಮೀನು, ಕೋಳಿ ಮತ್ತು ಜೇನು ನೊಣಗಳನ್ನು ಒಳಗೊಂಡು ಜಾನುವಾರು ತಳಿಸಂವರ್ಧನೆ ಮತ್ತು ಪಾಲನೆ ಮಾಡುವುದು, ಭೂ ಸಾಗುವಳಿಗೆ ಅಥವಾ ಹಿಂದೆ ಹೇಳಿದ ಯಾವುದೇ ಉದ್ದೇಶಕ್ಕೆ ಸಹಾಯಕವಾಗುವಂಥ ಭೂಬಳಕೆಯನ್ನು ಒಳಗೊಳ್ಳುತ್ತದೆ, ಆದರೆ ಅದು ಕಟ್ಟಡದೊಂದಿಗೆ ಉಪಯೋಗಿಸಬೇಕಾದ ತೋಟದ ಉದ್ದೇಶಗಳಿಗಾಗಿ ಇರುವ ಅಂಥ ಕಟ್ಟಡಕ್ಕೆ ಹೊಂದಿಕೊಂಡಿರುವ ಯಾವುದೇ ಭೂಮಿಯ ಬಳಕೆಯನ್ನು ಒಳಗೊಳ್ಳಕ್ಕದ್ದಲ್ಲ; ಮತ್ತು 'ಕೃಷಿಯ' ಎಂಬುದನ್ನು ತದನುಸಾರವಾಗಿ ಅರ್ಥೈಸತಕ್ಕದ್ದು;

(1ಎ) "ಮಂಡಲಿ" ಎಂದರೆ ಈ ಅಧಿನಿಯಮದ ಮೇರೆಗೆ ರಚಿಸಿದ ರಾಜ್ಯ ಪಟ್ಟಣ ಯೋಜನಾ ಮಂಡಲಿ ಎಂದು ಅರ್ಥ;

(1ಬಿ) "ವಾಣಿಜ್ಯ" ಎಂದರೆ ಯಾವುದೇ ವ್ಯಾಪಾರವನ್ನು, ವ್ಯವಹಾರವನ್ನು ಅಥವಾ ವೃತ್ತಿಯನ್ನು ನಡೆಸುವುದು. ಯಾವುದೇ ಆದ ಯಾವುದೇ ಬಗೆಯ ಸರಕುಗಳ ಮಾರಾಟವನ್ನು ಅಥವಾ ವಿನಿಮಯವನ್ನು ಮಾಡುವುದು, ಲಾಭವನ್ನು ಗಳಿಸುವ ದೃಷ್ಟಿಯಿಂದ ಆಸ್ಪತ್ರೆಗಳನ್ನು, ನರ್ಸಿಂಗ್ ಹೋಮ್‌ಗಳನ್ನು,

ರೋಗ ಚಿಕಿತ್ಸಾಲಯಗಳನ್ನು, ಧರ್ಮಶಾಲೆಗಳನ್ನು, ಶಿಕ್ಷಣಸಂಸ್ಥೆಗಳನ್ನು, ಹೋಟೆಲುಗಳನ್ನು, ಉಪಾಹಾರ ಮಂದಿರಗಳನ್ನು, ಶಿಕ್ಷಣ ಸಂಸ್ಥೆಗಳಿಗೆ ಸಂಬಂಧಿಸಿರದ ಭೋಜನ ಮಂದಿರಗಳನ್ನು ನಡೆಸುವುದು ಎಂದು ಅರ್ಥ, ಮತ್ತು ' ವಾಣಿಜ್ಯದ ' ಎಂಬುದನ್ನು ತದನುಸಾರವಾಗಿ ಅರ್ಥೈಸತಕ್ಕದ್ದು;

(1ಸಿ) ವ್ಯಾಕರಣ ವ್ಯತ್ಯಾಸಗಳೊಂದಿಗೆ 'ಅಭಿವೃದ್ಧಿ' ಎಂದರೆ, ಭೂಮಿಯಲ್ಲಿ, ಭೂಮಿಯ ಮೇಲೆ, ಭೂಮಿಯ ಮೇಲ್ಗಡೆ, ಭೂಮಿಯ ಅಡಿಯಲ್ಲಿ, ಕಟ್ಟಡ ನಿರ್ಮಾಣದ, ಇಂಜಿನಿಯರಿಂಗ್, ಗಣಿಗಾರಿಕೆಯ ಅಥವಾ ಇತರ ಕಾರ್ಯಾಚರಣೆಗಳನ್ನು ನಡೆಸುವುದು ಅಥವಾ ಯಾವುದೇ ಕಟ್ಟಡದಲ್ಲಿ ಅಥವಾ ಭೂಮಿಯಲ್ಲಿ ಅಥವಾ ಯಾವುದೇ ಕಟ್ಟಡದ ಅಥವಾ ಭೂಮಿಯ ಬಳಕೆಯಲ್ಲಿ ಯಾವುದೇ ಮುಖ್ಯ ಬದಲಾವಣೆಯನ್ನು ಮಾಡುವುದು ಎಂದು ಅರ್ಥ ಮತ್ತು ಅದು ಯಾವುದೇ ಭೂಮಿಯನ್ನು ಒಳ ವಿಭಾಗ ಮಾಡುವುದನ್ನು ಒಳಗೊಳ್ಳುತ್ತದೆ;

[2][(1ಡಿ) XXX][2]][1]

1. 1964ರ ಅಧಿನಿಯಮ ಸಂ. 14ರ ಮೂಲಕ 26.3.1964 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 2005ರ ಅಧಿನಿಯಮ 1ರ ಮೂಲಕ 14-2-2005ರಿಂದ ಜಾರಿಗೆ ಬರುವಂತೆ (1ಡಿ) ಖಂಡವನ್ನು ಬಿಟ್ಟುಬಿಡಲಾಗಿದೆ.

[1][(1ಇ)] "ನಿರ್ದೇಶಕ " ಎಂದರೆ, 3ನೇ ಪ್ರಕರಣದ ಮೇರೆಗೆ ನೇಮಕಗೊಂಡ ಪಟ್ಟಣ ಯೋಜನಾ ನಿರ್ದೇಶಕ ಎಂದು ಅರ್ಥ;

1. 1964ರ ಅಧಿನಿಯಮ ಸಂ. 14ರ ಮೂಲಕ 26.3.1964 ರಿಂದ ಜಾರಿಗೆ ಬರುವಂತೆ ಮರು ಸಂಖ್ಯೆ ನೀಡಲಾಗಿದೆ.

[1][(1ಇಎ)] "ಪರಂಪರೆ ಕಟ್ಟಡ" ಎಂದರೆ ವಾಸ್ತುಶಿಲ್ಪದ, ಸೌಂದರ್ಯದ, ಚಾರಿತ್ರಿಕ ಅಥವಾ ಸಾಂಸ್ಕೃತಿಕ ಮೌಲ್ಯಗಳನ್ನು ಹೊಂದಿರುವ, ಕಟ್ಟಡವು ಯಾರ ಅಧಿಕಾರ ವ್ಯಾಪ್ತಿಯಲ್ಲಿ ಇರುವುದೋ ಆ ಯೋಜನಾ ಪ್ರಾಧಿಕಾರವು ಅಥವಾ ಯಾವುದೇ ಇತರ ಸಕ್ಷಮ ಪ್ರಾಧಿಕಾರವು ಪರಂಪರೆಯ ಕಟ್ಟಡವೆಂದು ಘೋಷಿಸುವಂಥ ಕಟ್ಟಡ ಎಂದು ಅರ್ಥ;

(1ಇಬಿ) "ಪರಂಪರೆಯ ಎಲ್ಲೆಕಟ್ಟು" ಎಂದರೆ ಪರಂಪರೆಯ ಕಟ್ಟಡವನ್ನು ಅಥವಾ ಕಟ್ಟಡಗಳನ್ನು ಮತ್ತು ಅದರ ಎಲ್ಲೆಕಟ್ಟುಗಳನ್ನು ಅಥವಾ ಅದಕ್ಕೆ ಸಂಬಂಧಿಸಿದ ಸ್ಥಳಗಳನ್ನು ಒಳಗೊಂಡಿರುವ, ಯಾರ ಅಧಿಕಾರ ವ್ಯಾಪ್ತಿಯೊಳಗೆ ಅಂಥ ಪ್ರದೇಶವು ಇರುವುದೋ ಆ ಯೋಜನಾ ಪ್ರಾಧಿಕಾರವು ಅಥವಾ ಯಾವುದೇ ಇತರ ಸಕ್ಷಮ ಪ್ರಾಧಿಕಾರವು ಹಾಗೆಂದು ಘೋಷಿಸಿದ ಪ್ರದೇಶ ಎಂದು ಅರ್ಥ;][1]

1. 2005ರ ಅಧಿನಿಯಮ 1ರ ಮೂಲಕ 14-2-2005ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(1ಎಫ್) "ಕೈಗಾರಿಕೆ" ಎಂಬುದು ಕಾರ್ಖಾನೆಗಳ ಅಧಿನಿಯಮ, 1948ರಲ್ಲಿ (ಕೇಂದ್ರ ಅಧಿನಿಯಮ 1948ರ 63) ಪರಿಭಾಷಿಸಿರುವಂತೆ ಯಾವುದೇ ತಯಾರಿಕಾ ಕಾರ್ಯವಿಧಾನವನ್ನು ನಡೆಸುವುದನ್ನು ಒಳಗೊಳ್ಳುತ್ತದೆ, ಮತ್ತು 'ಕೈಗಾರಿಕೆಯ' ಎಂಬುದನ್ನು ತದನುಸಾರವಾಗಿ ಅರ್ಥೈಸತಕ್ಕದ್ದು;][1]

1. 1964ರ ಅಧಿನಿಯಮ ಸಂಖ್ಯೆ 14ರ ಮೂಲಕ 26.3.1964 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) "ಭೂಮಿ" ಎಂಬುದು, ಭೂಮಿಯಿಂದ ಮತ್ತು ಭೂಮಿಗೆ ಲಗತ್ತಾಗಿರುವ ಅಥವಾ ಭೂಮಿಗೆ ಲಗತ್ತಿಸಲಾದ ಯಾವುದಕ್ಕಾದರೂ ಖಾಯಂ ಆಗಿ ಅಂಟಿಕೊಂಡಿರುವ ವಸ್ತುಗಳಿಂದ ಉಂಟಾಗುವ ಪ್ರಯೋಜನಗಳನ್ನು ಒಳಗೊಳ್ಳುತ್ತದೆ;

(3) "ಭೂಬಳಕೆ" ಎಂದರೆ ಯಾವುದೇ ನಿರ್ದಿಷ್ಟಪಡಿಸಿದ ದಿನಾಂಕದಂದು ಯಾವ ಪ್ರಮುಖ ಬಳಕೆಗಾಗಿ ಭೂಮಿಯ ಒಂದು ತುಂಡನ್ನು ಬಳಸಿಕೊಳ್ಳಲಾಗುತ್ತಿದೆಯೋ ಆ ಪ್ರಮುಖ ಬಳಕೆ ಎಂದು ಅರ್ಥ;

[1][(3ಎ) "ಸ್ಥಳೀಯ ಪ್ರಾಧಿಕಾರ" ಎಂದರೆ, ಪೌರ ನಿಗಮ, ಮುನಿಸಿಪಲ್ ಕೌನ್ಸಿಲ್, [2][XXX][2] [3][ಪಟ್ಟಣ ಪಂಚಾಯತಿ ಅಥವಾ ಗ್ರಾಮ ಪಂಚಾಯತಿ][3] ಎಂದು ಅರ್ಥ ಮತ್ತು ಸ್ಥಳೀಯ ಪ್ರಾಧಿಕಾರವು, ತನ್ನ ಸ್ಥಳೀಯ ಪರಿಮಿತಿಗಳೊಳಗಿನ ಯಾವುದೇ ಭೂಮಿಯು ಈ ಅಧಿನಿಯಮದ ಮೇರೆಗೆ ಸಿದ್ಧಪಡಿಸಿದ ಅಥವಾ ಸಿದ್ಧಪಡಿಸಬೇಕಾದ ಯೋಜನೆಯ ಪ್ರದೇಶದಲ್ಲಿ ಬಂದರೆ 'ಸಂಬಂಧಪಟ್ಟ ಸ್ಥಳೀಯ ಪ್ರಾಧಿಕಾರ'ವಾಗಿರುತ್ತದೆ;][1]

1. 1964ರ ಅಧಿನಿಯಮ ಸಂಖ್ಯೆ 14ರ ಮೂಲಕ 26.3.1964ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 2004ರ ಅಧಿನಿಯಮ 23ರ ಮೂಲಕ 3-6-2004ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

3. 2004ರ ಅಧಿನಿಯಮ 23ರ ಮೂಲಕ 3-6-2004ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(3ಬಿ) "ಬೃಹತ್ ಯೋಜನೆ" ಎಂದರೆ, ಯೋಜನಾ ಪ್ರಾಧಿಕಾರದ ಅಧಿಕಾರವ್ಯಾಪ್ತಿಯಲ್ಲಿನ ಪ್ರದೇಶದ ಅಭಿವೃದ್ಧಿಗಾಗಿ ಅಥವಾ ಪುನರ್ ಅಭಿವೃದ್ಧಿಗಾಗಿ ಯೋಜನೆ ಎಂದು ಅರ್ಥ;][1]

1. 2005ರ ಅಧಿನಿಯಮ ಸಂಖ್ಯೆ 1ರ ಮೂಲಕ 14-02-2005ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(4) "ಅಧಿಸೂಚನೆ" ಎಂದರೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ ಅಧಿಸೂಚನೆ;

(5) "ಒಡೆಯ" ಎಂಬುದು, ಸ್ವತ್ತಿನ ಬಾಡಿಗೆಗಳನ್ನು ಅಥವಾ ಲಾಭಗಳನ್ನು ಯಾವುದಕ್ಕೆ ಸಂಬಂಧಿಸಿದಂತೆ ಉಪಯೋಗಿಸಲಾಗುತ್ತಿದೆಯೋ, ಆ ಸಂಬಂಧದಲ್ಲಿ ತನಗಾಗಿ ಅಥವಾ ಇನ್ನೊಬ್ಬ ವ್ಯಕ್ತಿಗಾಗಿ ಏಜೆಂಟನಾಗಿ, ನ್ಯಾಸಧಾರಿಯಾಗಿ, ವ್ಯವಸ್ಥಾಪಕನಾಗಿ ಅಥವಾ ರಿಸೀವರನಾಗಿ ಅಥವಾ ಯಾವುದೇ ಧಾರ್ಮಿಕ ಅಥವಾ ಧರ್ಮಾರ್ಥ ಉದ್ದೇಶಕ್ಕಾಗಿ ತತ್ಕಾಲದಲ್ಲಿ ಸ್ವೀಕರಿಸುವ ಅಥವಾ ಸ್ವೀಕರಿಸಲು ಹಕ್ಕುಳ್ಳವನಾದ ಯಾರೇ ವ್ಯಕ್ತಿಯನ್ನು ಒಳಗೊಳ್ಳುತ್ತದೆ;

[1][(6) "ಯೋಜನಾ ಪ್ರದೇಶ" ಎಂದರೆ ಈ ಅಧಿನಿಯಮದ ಮೇರೆಗೆ ಸ್ಥಳೀಯ ಯೋಜನಾ ಪ್ರದೇಶವೆಂದು ಘೋಷಿಸಲಾದ [2][ಅಥವಾ ಸೇರಿಸಲಾದ][2] ಯಾವುದೇ ಪ್ರದೇಶ ಎಂದು ಅರ್ಥ;

1. 1964ರ ಅಧಿನಿಯಮ ಸಂಖ್ಯೆ 14ರ ಮೂಲಕ 26.3.1964 ರಿಂದ ಜಾರಿಗೆ ಬರುವಂತೆ (6) ಮತ್ತು (7) ನೇ ಉಪ-ಪ್ರಕರಣಗಳನ್ನು ಪ್ರತಿಯೋಜಿಸಲಾಗಿದೆ.

2. 1991ರ ಅಧಿನಿಯಮ ಸಂಖ್ಯೆ 17ರ ಮೂಲಕ 19.4.1991 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(7) "ಯೋಜನಾ ಪ್ರಾಧಿಕಾರ" ಎಂದರೆ,-

(ಎ) [1][(i) ಬೆಂಗಳೂರು ನಗರವನ್ನು ಒಳಗೊಂಡಿರುವ ಸ್ಥಳೀಯ ಯೋಜನಾ ಪ್ರದೇಶದ ಸಂದರ್ಭದಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ; ಮತ್ತು][1]

1. 1976ರ ಅಧಿನಿಯಮ ಸಂಖ್ಯೆ 12ರ, ಮೂಲಕ 20.12.1975 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(iಎ) ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರ ಅಧಿನಿಯಮ, 1987ರಲ್ಲಿ ಪರಿಭಾಷಿಸಿರುವಂತೆ ಯಾವುದೇ "ನಗರ ಪ್ರದೇಶ"ವನ್ನು ಒಳಗೊಳ್ಳುವ ಸ್ಥಳೀಯ ಯೋಜನಾ ಪ್ರದೇಶದ ಸಂದರ್ಭದಲ್ಲಿ ಅಂಥ ನಗರ ಪ್ರದೇಶದ ನಗರಾಭಿವೃದ್ಧಿ ಪ್ರಾಧಿಕಾರ;][1]

1. 1987ರ ಅಧಿನಿಯಮ ಸಂ.34ರ ಮೂಲಕ 1-05-1988ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(iಬಿ) ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ ಅಧಿನಿಯಮ, 2002 ರಲ್ಲಿ ಪರಿಭಾಷಿದಂತೆ, ಪರಂಪರೆಯ ಪ್ರದೇಶದ ಸಂದರ್ಭದಲ್ಲಿ (ಇಲ್ಲಿ ಇನ್ನು ಮುಂದೆ ಪರಂಪರೆಯ ಪ್ರದೇಶವೆಂದು ಉಲ್ಲೇಖಿಸಲಾಗಿದೆ) ಆ ಅಧಿನಿಯಮದ ಅಡಿಯಲ್ಲಿ ರಚಿತವಾದ ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ;][1]

1. 2003ರ ಅಧಿನಿಯಮ ಸಂಖ್ಯೆ 18ರ ಮೂಲಕ 27-1-2005ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ii) ಯಾವ ಸ್ಥಳೀಯ ಯೋಜನಾ ಪ್ರದೇಶಕ್ಕೆ ಸಂಬಂಧಿಸಿದಂತೆ ರಾಜ್ಯ ಸರ್ಕಾರವು ಪ್ರತ್ಯೇಕ ಯೋಜನಾ ಪ್ರಾಧಿಕಾರವನ್ನು ರಚಿಸುವುದು ವಿಹಿತವೆಂದು ಭಾವಿಸುವುದೋ ಆ ಯಾವುದೇ ಇತರ ಸ್ಥಳೀಯ ಯೋಜನಾ ಪ್ರದೇಶದ ಸಂದರ್ಭದಲ್ಲಿ ಈ ಅಧಿನಿಯಮದ ಅಡಿಯಲ್ಲಿ ರಚಿತವಾದ ಯೋಜನಾ ಪ್ರಾಧಿಕಾರ;

(ಬಿ) ಯಾವ ಸ್ಥಳೀಯ ಯೋಜನಾ ಪ್ರದೇಶಕ್ಕೆ ಸಂಬಂಧಿಸಿದಂತೆ ಈ ಅಧಿನಿಯಮದ ಮೇರೆಗೆ ಯೋಜನಾ ಪ್ರಾಧಿಕಾರವನ್ನು ರಚಿಸಿಲ್ಲವೋ ಆ ಯಾವುದೇ ಸ್ಥಳೀಯ ಯೋಜನಾ ಪ್ರದೇಶದ ಸಂದರ್ಭದಲ್ಲಿ, ಅಂಥ ಸ್ಥಳೀಯ ಯೋಜನಾ ಪ್ರದೇಶದ ಮೇಲೆ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ, ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೇರೆಗೆ ರಚಿಸಿದ ಪಟ್ಟಣ ಮೇಲ್ವಾಟು ಮಂಡಲಿ, ಮತ್ತು ಅಂಥ ಪಟ್ಟಣ ಮೇಲ್ವಾಟು ಮಂಡಲಿ ಇಲ್ಲದಿರುವಲ್ಲಿ, ಅಂಥ ಸ್ಥಳೀಯ ಯೋಜನಾ ಪ್ರದೇಶದ ಮೇಲೆ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಸ್ಥಳೀಯ ಪ್ರಾಧಿಕಾರ

– ಎಂದು ಅರ್ಥ;][1]

(8) "ಪ್ಲಾಟು" ಎಂದರೆ, ಏಕ ಒಡೆತನದಲ್ಲಿ ಧಾರಣ ಮಾಡಿರುವ ಭೂಮಿಯ ಅಖಂಡ ಭಾಗ ಎಂದು ಅರ್ಥ;

(9) "ನಿಯಮಿಸಲಾದುದು" ಎಂದರೆ, ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ನಿಯಮಗಳ ಮೂಲಕ ನಿಯಮಿಸಲಾದುದು ಎಂದು ಅರ್ಥ;

(10) "ಪುನರ್‌ರಚಿತ ಪ್ಲಾಟು" ಎಂದರೆ ಯಾವ ಪ್ಲಾಟನ್ನು ಪಟ್ಟಣದ ಯೋಜಿತ ಕಾರ್ಯಯೋಜನೆಯನ್ನು ಸಿದ್ಧಪಡಿಸುವ ಮೂಲಕ ಯಾವುದೇ ರೀತಿಯಲ್ಲಿ ಬದಲಾಯಿಸಲಾಗಿದೆಯೋ ಆ ಪ್ಲಾಟು ಎಂದು ಅರ್ಥ;

**ವಿವರಣೆ**:– "ಬದಲಾಯಿಸಿದ" ಎಂಬುದು ಒಡೆತನದ ಬದಲಾವಣೆಯನ್ನು ಒಳಗೊಳ್ಳುತ್ತದೆ;

(11) "ವಿನಿಯಮನಗಳು" ಎಂದರೆ ಈ ಅಧಿನಿಯಮದ ಅಡಿಯಲ್ಲಿ ಮಾಡಿದ ಭೂ ಬಳಕೆಯನ್ನು ನಿಯಂತ್ರಿಸುವ ವಲಯ ವಿನಿಯಮನಗಳು ಎಂದು ಅರ್ಥ;

[1][(11ಎ) "ವಾಸಸ್ಥಳ" ಎಂಬುದು ತೋಟಗಳು, ನೆಲಗಳು, ಗ್ಯಾರೇಜುಗಳು, ಕೊಟ್ಟಿಗೆಗಳು ಇವುಗಳನ್ನು ಒಳಗೊಂಡು ಯಾವುದೇ ಭೂಮಿಯನ್ನು ಅಥವಾ ಕಟ್ಟಡವನ್ನು ಅಥವಾ ಅದರ ಭಾಗವನ್ನು ಮತ್ತು ಅಂಥ ಕಟ್ಟಡಕ್ಕೆ ಹೊಂದಿಕೊಂಡಿರುವ ಔಟ್‌ಹೌಸುಗಳು ಯಾವುವಾದರೂ ಇದ್ದರೆ ಅವುಗಳನ್ನು ಮನುಷ್ಯನ ವಾಸಕ್ಕಾಗಿ ಉಪಯೋಗಿಸುವುದನ್ನು ಒಳಗೊಳ್ಳುತ್ತದೆ ಮತ್ತು "ವಾಸಸ್ಥಳದ" ಎಂಬುದನ್ನು ತದನುಸಾರವಾಗಿ ಅರ್ಥೈಸತಕ್ಕದ್ದು;][1]

1. 1964ರ ಅಧಿನಿಯಮ ಸಂ.14ರ, ಮೂಲಕ-26-3-1964ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(12) "ಕಾರ್ಯಯೋಜನೆ"ಯು ಪಟ್ಟಣದ ಯೋಜಿತ ಕಾರ್ಯಯೋಜನೆಗೆ ಸಂಬಂಧಪಟ್ಟ ನಕ್ಷೆಯನ್ನು ಒಳಗೊಳ್ಳುತ್ತದೆ;

[1][(13) ಈ ಅಧಿನಿಯಮದಲ್ಲಿ ಪರಿಭಾಷಿಸಿಲ್ಲದ ಪದಗಳು ಮತ್ತು ಪದಾವಳಿಗಳು [2][ಕರ್ನಾಟಕ][2] ಪೌರಸಭೆಗಳ ಅಧಿನಿಯಮ, 1964 ರಲ್ಲಿರುವಂಥದೇ ಅರ್ಥವನ್ನು ಹೊಂದಿರುತ್ತವೆ.][1]

1. 1964 ರ ಅಧಿನಿಯಮ ಸಂ.14ರ ಮೂಲಕ 26-3-1964 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ 1973ರ ಮೂಲಕ 01-11-1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

**3. ಪಟ್ಟಣ ಯೋಜನಾ ನಿರ್ದೇಶಕರ ನೇಮಕ:–** (1) ರಾಜ್ಯ ಸರ್ಕಾರವು, ರಾಜ್ಯಕ್ಕಾಗಿ ಪಟ್ಟಣ ಯೋಜನಾ ನಿರ್ದೇಶಕನೆಂದು ನಿಯಮಿಸಿದ ವಿದ್ಯಾರ್ಹತೆಗಳನ್ನು ಹೊಂದಿರುವ ವ್ಯಕ್ತಿಯನ್ನು ನೇಮಕ ಮಾಡತಕ್ಕದ್ದು ಮತ್ತು ಅವನಿಗೆ, ಅದು ಸೂಕ್ತವೆಂದು ಯೋಚಿಸುವಂಥ ಸಂಬಳ ಮತ್ತು ಸಿಬ್ಬಂದಿಯನ್ನು ಕೊಡಬಹುದು.

(2) ಅಂಥ ನೇಮಕದ ಮತ್ತು ಅವನ ಸಿಬ್ಬಂದಿಯ ಖರ್ಚನ್ನು ರಾಜ್ಯದ ರಾಜಸ್ವಗಳಿಂದ ಸಂದಾಯ ಮಾಡತಕ್ಕದ್ದು.

**4. ರಾಜ್ಯ ಪಟ್ಟಣ ಯೋಜನಾ ಮಂಡಲಿ:–** ಯೋಜನೆ ಮತ್ತು ಅಭಿವೃದ್ಧಿಯ ಬಗ್ಗೆ ರಾಜ್ಯ ಸರ್ಕಾರಕ್ಕೆ ಸಲಹೆಯನ್ನು ಕೊಡುವುದಕ್ಕಾಗಿ ಮತ್ತು ಇಡೀ ರಾಜ್ಯದ ಸಮತೋಲಿತ ಅಭಿವೃದ್ಧಿಯನ್ನು ಸಾಧಿಸುವುದಕ್ಕಾಗಿ ತತ್ವಗಳನ್ನು ಮತ್ತು ಕಾರ್ಯನೀತಿಗಳನ್ನು ನಿರ್ಧರಿಸುವುದಕ್ಕಾಗಿ ನಿಯಮಿಸಬಹುದಾದಂಥ ಸದಸ್ಯರನ್ನು ಒಳಗೊಂಡ ಮತ್ತು ಅಂಥ ರೀತಿಯಲ್ಲಿ ರಾಜ್ಯಕ್ಕಾಗಿ, ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, ರಾಜ್ಯ ಪಟ್ಟಣ ಯೋಜನಾ ಮಂಡಲಿಯನ್ನು ರಚಿಸಬಹುದು.

## [1][ಅಧ್ಯಾಯ I-ಎ

## ಸ್ಥಳೀಯ ಯೋಜನಾ ಪ್ರದೇಶಗಳು ಮತ್ತು ಯೋಜನಾ ಪ್ರಾಧಿಕಾರಗಳು

1. 1964ರ ಅಧಿನಿಯಮ ಸಂ.14ರ ಮೂಲಕ 26-3-1964 ರಿಂದ ಜಾರಿಗೆ ಬರುವಂತೆ ಅಧ್ಯಾಯ ೧ಎ, ಪ್ರಕರಣ4ಎ ಯಿಂದ 4ಜಿ ವರೆಗೆ ಸೇರಿಸಲಾಗಿದೆ.

**4ಎ. ಸ್ಥಳೀಯ ಯೋಜನಾ ಪ್ರದೇಶಗಳು, ಅವುಗಳ ವಿಲೀನ, ಒಳವಿಭಾಗ, ಸ್ಥಳೀಯ ಯೋಜನಾ ಪ್ರದೇಶದಲ್ಲಿ ಯಾವುದೇ ಪ್ರದೇಶದ ಸೇರ್ಪಡೆ ಇವುಗಳ ಬಗ್ಗೆ ಘೋಷಣೆ:–** (1) ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, ರಾಜ್ಯದಲ್ಲಿನ ಯಾವುದೇ ಪ್ರದೇಶವನ್ನು, ಈ ಅಧಿನಿಯಮದ ಉದ್ದೇಶಗಳಿಗಾಗಿ, ಸ್ಥಳೀಯ ಯೋಜನಾ ಪ್ರದೇಶವೆಂದು ಘೋಷಿಸಬಹುದು. [1][ಅಥವಾ ಅಂಥ ಸ್ಥಳೀಯ ಯೋಜನಾ ಪ್ರದೇಶದೊಳಗೆ ಅದಕ್ಕೆ ಹೊಂದಿಕೊಂಡಿರುವ ಯಾವುದೇ ಪ್ರದೇಶವನ್ನು ಸೇರಿಸಬಹುದು ಮತ್ತು ಅಂಥ ಘೋಷಣೆಯ ಅಥವಾ ಸೇರ್ಪಡೆಯ ತರುವಾಯ][1] ಈ ಅಧಿನಿಯಮವು ಅಂಥ ಪ್ರದೇಶಕ್ಕೆ ಅನ್ವಯವಾಗತಕ್ಕದ್ದು:

1. 1991 ರ ಅಧಿನಿಯಮ ಸಂ.17ರ ಮೂಲಕ 19-4-91 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಪರಂತು, ಯಾವುದೇ ಮಿಲಿಟರಿ ದಂಡುಪ್ರದೇಶವನ್ನು ಅಥವಾ ಮಿಲಿಟರಿ ದಂಡುಪ್ರದೇಶದ ಭಾಗವನ್ನು ಯಾವುದೇ ಅಂಥ ಪ್ರದೇಶದಲ್ಲಿ ಸೇರಿಸತಕ್ಕದ್ದಲ್ಲ:

[1][ಮತ್ತೂ ಪರಂತು, ಪರಂಪರೆ ಪ್ರದೇಶದ ಸಂದರ್ಭದಲ್ಲಿ, ಈ ಉಪ-ಪ್ರಕರಣದ ಮೇರೆಗೆ ಘೋಷಿಸಲಾದ ಸ್ಥಳೀಯ ಯೋಜನಾ ಪ್ರದೇಶವು ಪರಂಪರೆ ಪ್ರದೇಶದೊಂದಿಗೆ ಕೊನೆಗೊಳ್ಳತಕ್ಕದ್ದು.][1]

1. 2003ರ ಅಧಿನಿಯಮ ಸಂ.18ರ ಮೂಲಕ 27-1-2005ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) ಪ್ರತಿಯೊಂದು ಅಂಥ ಅಧಿಸೂಚನೆಯು, ಯಾವ ಪ್ರದೇಶದ ಸರಹದ್ದುಗಳಿಗೆ ಅದು ಸಂಬಂಧಿಸಿದೆಯೋ ಆ ಪ್ರದೇಶದ ಪರಿಮಿತಿಗಳನ್ನು ವಿವರಿಸತಕ್ಕದ್ದು.

(3) ರಾಜ್ಯ ಸರ್ಕಾರವು, ಮಂಡಲಿಯೊಂದಿಗೆ ಸಮಾಲೋಚಿಸಿದ ತರುವಾಯ, ಎರಡು ಅಥವಾ ಹೆಚ್ಚು ಯೋಜನಾ ಪ್ರದೇಶಗಳನ್ನು ಒಂದು ಸ್ಥಳೀಯ ಯೋಜನಾ ಪ್ರದೇಶದೊಳಗೆ ವಿಲೀನಗೊಳಿಸಬಹುದು, ಸ್ಥಳೀಯ ಯೋಜನಾ ಪ್ರದೇಶವನ್ನು ಬೇರೆ ಬೇರೆ ಸ್ಥಳೀಯ ಯೋಜನಾ ಪ್ರದೇಶಗಳನ್ನಾಗಿ ಒಳವಿಭಾಗಮಾಡಬಹುದು, ಮತ್ತು ಹಾಗೆ ವಿಭಾಗ ಮಾಡಿದ ಪ್ರದೇಶಗಳನ್ನು ಯಾವುದೇ ಇತರ ಸ್ಥಳೀಯ ಯೋಜನಾ ಪ್ರದೇಶದಲ್ಲಿ ಸೇರಿಸಬಹುದು.

(4) ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, ರಾಜ್ಯ ಸರ್ಕಾರವು ಅವಶ್ಯಕವೆಂದು ಪರ್ಯಾಲೋಚಿಸಬಹುದಾದಂಥ ವಿನಾಯಿತಿಗಳು ಮತ್ತು ಅಳವಡಿಕೆಗಳು ಮತ್ತು ಮಾರ್ಪಾಟುಗಳೊಂದಿಗೆ, ಆ ಕಾಲದಲ್ಲಿ ರಚಿಸಿದ, ಹೊರಡಿಸಿದ, ಪ್ರದಾನ ಮಾಡಿದ ಮತ್ತು ಯಾವುದೇ ಇತರ ಸ್ಥಳೀಯ ಯೋಜನಾ ಪ್ರದೇಶದಲ್ಲಿ ಜಾರಿಯಲ್ಲಿರುವ ಎಲ್ಲಾ ಅಥವಾ ಯಾವುದೇ ನಿಯಮ, ವಿನಿಯಮನಗಳು, ಆದೇಶಗಳು, ನಿರ್ದೇಶನಗಳು ಮತ್ತು ಅಧಿಕಾರಗಳು, ಈ ಪ್ರಕರಣದ ಮೇರೆಗೆ ಸ್ಥಳೀಯ ಯೋಜನಾ ಪ್ರದೇಶವೆಂದು ಘೋಷಿಸಿರುವ, ಅದರೊಂದಿಗೆ ವಿಲೀನಗೊಂಡ ಅಥವಾ ಅದರಲ್ಲಿ ಸೇರಿಸಿದ ಪ್ರದೇಶಕ್ಕೆ ಅನ್ವಯವಾಗತಕ್ಕದ್ದೆಂದು ಮತ್ತು ಅಂಥ ನಿಯಮಗಳು, ವಿನಿಯಮನಗಳು, ಉಪವಿಧಿಗಳು, ಆದೇಶಗಳು, ನಿರ್ದೇಶನಗಳು ಮತ್ತು ಅಧಿಕಾರಗಳು ಇನ್ನೂ ಹೆಚ್ಚಿನ ಪ್ರಕಟಣೆಯಿಲ್ಲದೆ ಅಂಥ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಕ್ಷಣ ಅನ್ವಯವಾಗತಕ್ಕದ್ದೆಂದು ನಿರ್ದೇಶಿಸಬಹುದು.

(5) ಸ್ಥಳೀಯ ಯೋಜನಾ ಪ್ರದೇಶಗಳನ್ನು ವಿಲೀನಗೊಳಿಸಿದಾಗ ಅಥವಾ ಒಳವಿಭಾಗ ಮಾಡಿದಾಗ, ಅಥವಾ ಹಾಗೆ ಒಳವಿಭಾಗ ಮಾಡಿದ ಪ್ರದೇಶಗಳನ್ನು ಇತರ ಸ್ಥಳೀಯ ಯೋಜನಾ ಪ್ರದೇಶಗಳಲ್ಲಿ ಸೇರಿಸಿದಾಗ, ರಾಜ್ಯ ಸರ್ಕಾರವು, ಮಂಡಲಿ, ಯೋಜನಾ ಪ್ರಾಧಿಕಾರ ಅಥವಾ ಸಂಬಂಧಪಟ್ಟ ಪ್ರಾಧಿಕಾರಗಳೊಂದಿಗೆ ಸಮಾಲೋಚಿಸಿದ ತರುವಾಯ, ಯೋಜನಾ ಪ್ರಾಧಿಕಾರದ ನಿಧಿಯ ಶಿಲ್ಕಿನ ಯಾವ ಭಾಗವು ಆ ಯೋಜನಾ ಪ್ರಾಧಿಕಾರದಲ್ಲಿ ಅಥವಾ ಸಂಬಂಧಪಟ್ಟ ಪ್ರಾಧಿಕಾರಗಳಲ್ಲಿ ನಿಹಿತಗೊಳ್ಳತಕ್ಕದ್ದು ಎಂಬುದನ್ನೂ ಮತ್ತು ಯಾವ ರೀತಿಯಲ್ಲಿ ಆ ಯೋಜನಾ ಪ್ರಾಧಿಕಾರದ ಅಥವಾ ಪ್ರಾಧಿಕಾರಗಳ ಸ್ವತ್ತುಗಳನ್ನು ಮತ್ತು ಹೊಣೆಗಾರಿಕೆಗಳನ್ನು ಅವುಗಳಲ್ಲಿ ಹಂಚತಕ್ಕದ್ದೆಂಬುದನ್ನು ನಿರ್ಧರಿಸಿ ಒಂದು ಕಾರ್ಯಯೋಜನೆಯನ್ನು ರೂಪಿಸತಕ್ಕದ್ದು ಮತ್ತು ಆ ಕಾರ್ಯಯೋಜನೆಯನ್ನು ಅಧಿಸೂಚಿಸಿದ ತರುವಾಯ ಆ ನಿಧಿಯು, ಸ್ವತ್ತುಗಳು ಮತ್ತು ಹೊಣೆಗಾರಿಕೆಗಳು ತದನುಸಾರವಾಗಿ ನಿಹಿತಗೊಳ್ಳತಕ್ಕದ್ದು ಮತ್ತು ಅವುಗಳನ್ನು ಹಂಚತಕ್ಕದ್ದು.

**4ಬಿ. ಈ ಅಧಿನಿಯಮದ ಜಾರಿಯಿಂದ ಸ್ಥಳೀಯ ಯೋಜನಾ ಪ್ರದೇಶವನ್ನು ಹಿಂತೆಗೆದುಕೊಳ್ಳುವ ಅಧಿಕಾರ:–** (1) ರಾಜ್ಯ ಸರ್ಕಾರವು, ಅಧಿಸೂಚನೆ ಮೂಲಕ, ಈ ಅಧಿನಿಯಮದ ಜಾರಿಯಿಂದ, ಅದರ ಮೇರೆಗೆ ಘೋಷಿಸಿದ ಯಾವುದೇ ಇಡೀ ಸ್ಥಳೀಯ ಯೋಜನಾ ಪ್ರದೇಶವನ್ನು ಅಥವಾ ಅದರ ಭಾಗವನ್ನು ಹಿಂತೆಗೆದುಕೊಳ್ಳಬಹುದು.

(2) ಯಾವುದೇ ಸ್ಥಳೀಯ ಯೋಜನಾ ಪ್ರದೇಶಕ್ಕೆ ಸಂಬಂಧಿಸಿದಂತೆ, ಈ ಪ್ರಕರಣದ ಮೇರೆಗೆ ಅಧಿಸೂಚನೆಯನ್ನು ಹೊರಡಿಸಿದಾಗ,-

(i) ಈ ಅಧಿನಿಯಮವು ಮತ್ತು ಈ ಅಧಿನಿಯಮದ ಮೇರೆಗೆ ಹೊರಡಿಸಿದ, ರಚಿಸಿದ ಅಥವಾ ಪ್ರದಾನ ಮಾಡಿದ ಎಲ್ಲಾ ಅಧಿಸೂಚನೆಗಳು, ನಿಯಮಗಳು, ವಿನಿಯಮನಗಳು, ಅದೇಶಗಳು, ನಿರ್ದೇಶನಗಳು ಮತ್ತು ಅಧಿಕಾರಗಳು ಸದರಿ ಪ್ರದೇಶಕ್ಕೆ ಅನ್ವಯವಾಗುವುದು ನಿಂತುಹೋಗತಕ್ಕದ್ದು;

(ii) ರಾಜ್ಯ ಸರ್ಕಾರವು, ಆ ಮಂಡಲಿ ಮತ್ತು ಆ ಸ್ಥಳೀಯ ಪ್ರಾಧಿಕಾರ ಅಥವಾ ಸಂಬಂಧಪಟ್ಟ ಪ್ರಾಧಿಕಾರಗಳೊಂದಿಗೆ ಸಮಾಲೋಚಿಸಿದ ತರುವಾಯ, ಆ ಸ್ಥಳೀಯ ಯೋಜನಾ ಪ್ರಾಧಿಕಾರದ ನಿಧಿಯ ಶಿಲ್ಕಿನ ಯಾವ ಭಾಗವು ರಾಜ್ಯ ಸರ್ಕಾರದಲ್ಲಿ ಮತ್ತು ಸಂಬಂಧಪಟ್ಟ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ಪ್ರಾಧಿಕಾರಗಳಲ್ಲಿ ನಿಹಿತಗೊಳ್ಳತಕ್ಕದ್ದು ಎಂಬುದನ್ನು ಮತ್ತು ಯಾವ ರೀತಿಯಲ್ಲಿ ಸ್ಥಳೀಯ ಯೋಜನಾ ಪ್ರಾಧಿಕಾರದ ಸ್ವತ್ತುಗಳನ್ನು ಮತ್ತು ಹೊಣೆಗಾರಿಕೆಗಳನ್ನು ರಾಜ್ಯ ಸರ್ಕಾರದ ಮತ್ತು ಆ ಸ್ಥಳೀಯ ಪ್ರಾಧಿಕಾರದ ಅಥವಾ ಪ್ರಾಧಿಕಾರಗಳ ನಡುವೆ ಹಂಚತಕ್ಕದ್ದೆಂಬುದನ್ನು ನಿರ್ಧರಿಸುವ ಕಾರ್ಯಯೋಜನೆಯನ್ನು ರೂಪಿಸತಕ್ಕದ್ದು, ಮತ್ತು ಆ ಕಾರ್ಯಯೋಜನೆಯನ್ನು ಅಧಿಸೂಚಿಸಿದ ತರುವಾಯ, ಆ ಯೋಜನಾ ಪ್ರಾಧಿಕಾರದ ಆ ನಿಧಿ, ಸ್ವತ್ತು ಮತ್ತು ಹೊಣೆಗಾರಿಕೆಗಳು ತದನುಸಾರವಾಗಿ ನಿಹಿತಗೊಳ್ಳತಕ್ಕದ್ದು ಮತ್ತು ಅವುಗಳನ್ನು ಹಂಚತಕ್ಕದ್ದು.

**4ಸಿ. ಯೋಜನಾ ಪ್ರಾಧಿಕಾರದ ರಚನೆ:–** (1) ಸ್ಥಳೀಯ ಯೋಜನಾ ಪ್ರದೇಶವನ್ನು ಘೋಷಿಸಿದ ತರುವಾಯ, ಆದಷ್ಟು ಬೇಗ, ರಾಜ್ಯ ಸರ್ಕಾರವು ಮಂಡಲಿಯೊಡನೆ ಸಮಾಲೋಚಿಸಿ, ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ, ಅದಕ್ಕೆ ವಹಿಸಿದ ಪ್ರಕಾರ್ಯಗಳನ್ನು ನೆರವೇರಿಸುವ ಉದ್ದೇಶಗಳಿಗಾಗಿ, ಆ ಪ್ರದೇಶದ ಮೇಲೆ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ, ಆ ಪ್ರದೇಶದ "ಯೋಜನಾ ಪ್ರಾಧಿಕಾರ" ಎಂದು ಕರೆಯಲಾಗುವ ಒಂದು ಪ್ರಾಧಿಕಾರವನ್ನು ರಚಿಸಬಹುದು.

(2) ಉಪಪ್ರಕರಣ (1)ರ ಮೇರೆಗೆ ರಚಿಸಿದ ಪ್ರತಿಯೊಂದು ಯೋಜನಾ ಪ್ರಾಧಿಕಾರವು, ಮೇಲೆ ಹೇಳಿದ ಹೆಸರಿನಿಂದ ಚರ ಮತ್ತು ಸ್ಥಿರ ಸ್ವತ್ತುಗಳೆರಡನ್ನೂ ಆರ್ಜಿಸುವ, ಧಾರಣ ಮಾಡುವ ಮತ್ತು ವಿಲೆ ಮಾಡುವ ಮತ್ತು ಕರಾರು ಮಾಡಿಕೊಳ್ಳುವ ಅಧಿಕಾರದೊಂದಿಗೆ ಶಾಶ್ವತ ಉತ್ತರಾಧಿಕಾರವನ್ನು ಮತ್ತು ಸಾಮಾನ್ಯ ಮೊಹರನ್ನು ಹೊಂದಿರುವ, ನಿಗಮಿತ ನಿಕಾಯವಾಗಿರತಕ್ಕದ್ದು ಮತ್ತು ಸದರಿ ಹೆಸರಿನಿಂದ ದಾವೆಯನ್ನು ಹೂಡತಕ್ಕದ್ದು ಮತ್ತು ಅದು ದಾವೆಗೆ ಗುರಿಯಾಗತಕ್ಕದ್ದು.

(3) ಉಪಪ್ರಕರಣ (1)ರ ಮೇರೆಗೆ ರಚಿಸಿದ ಪ್ರತಿಯೊಂದು ಯೋಜನಾ ಪ್ರಾಧಿಕಾರವು, ಈ ಕೆಳಕಂಡ ಸದಸ್ಯರನ್ನು ಒಳಗೊಂಡಿರತಕ್ಕದ್ದು, ಎಂದರೆ,–

(i) ರಾಜ್ಯ ಸರ್ಕಾರವು ನೇಮಕ ಮಾಡಿದ ಅಧ್ಯಕ್ಷ;

(ii) ರಾಜ್ಯ ಸರ್ಕಾರವು ನೇಮಕ ಮಾಡಿದ ಪಟ್ಟಣ ಯೋಜನಾಧಿಕಾರಿ, ಅವನು ಆ ಯೋಜನಾ ಪ್ರಾಧಿಕಾರದ ಸದಸ್ಯ ಕಾರ್ಯದರ್ಶಿಯಾಗಿರತಕ್ಕದ್ದು;

(iii) ಸ್ಥಳೀಯ ನಿಕಾಯಗಳ ಈ ಕೆಳಕಂಡ ಪ್ರತಿನಿಧಿಗಳು,–

(ಎ) ಯಾವ ಯೋಜನಾ ಪ್ರದೇಶದಲ್ಲಿ ಒಂದೇ ಒಂದು ಸ್ಥಳೀಯ ಪ್ರಾಧಿಕಾರವು ಅಧಿಕಾರ ವ್ಯಾಪ್ತಿಯನ್ನು ಹೊಂದಿರುವುದೋ ಆ ಯೋಜನಾ ಪ್ರದೇಶದ ಸಂದರ್ಭದಲ್ಲಿ, ಆ ಪ್ರಾಧಿಕಾರದ ಸದಸ್ಯರುಗಳೊಳಗಿಂದ ಆ ಸ್ಥಳೀಯ ಪ್ರಾಧಿಕಾರವು ನಾಮನಿರ್ದೇಶನ ಮಾಡಿದ ಪ್ರತಿನಿಧಿ ಮತ್ತು ಆ ಸ್ಥಳೀಯ ಪ್ರಾಧಿಕಾರದ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿ;

(ಬಿ) ಯಾವ ಯೋಜನಾ ಪ್ರದೇಶದಲ್ಲಿ ಎರಡು ಅಥವಾ ಹೆಚ್ಚು ಸ್ಥಳೀಯ ಪ್ರಾಧಿಕಾರಗಳು ಅಧಿಕಾರ ವ್ಯಾಪ್ತಿಯನ್ನು ಹೊಂದಿರುವವೋ ಆ ಯೋಜನಾ ಪ್ರದೇಶದ ಸಂದರ್ಭದಲ್ಲಿ, ಅಂಥ ಸ್ಥಳೀಯ ಪ್ರಾಧಿಕಾರಗಳು ಪ್ರತಿನಿಧಿತವಾಗಬೇಕೆಂದು, ನಾಮನಿರ್ದೇಶನ ಮಾಡಬೇಕೆಂದು, ರಾಜ್ಯ ಸರ್ಕಾರವು ಅವಶ್ಯವೆಂದು ಪರಿಗಣಿಸಹುದಾದಂಥ ಅಂಥ ಪ್ರತಿಯೊಂದು ಸ್ಥಳೀಯ ಪ್ರಾಧಿಕಾರದ ಸದಸ್ಯರೊಳಗಿಂದ ಒಬ್ಬ ಪ್ರತಿನಿಧಿ:

ಪರಂತು, ಅಂಥ ಪ್ರತಿನಿಧಿಗಳ ಒಟ್ಟು ಸಂಖ್ಯೆಯು ಐದನ್ನು ಮೀರತಕ್ಕದ್ದಲ್ಲ;

(iv) ರಾಜ್ಯ ಸರ್ಕಾರವು ನೇಮಕ ಮಾಡಿದ ಮೂವರು ಇತರ ಸದಸ್ಯರು.

(4) ರಾಜ್ಯ ಸರ್ಕಾರವು, ತಾನು ಸೂಕ್ತವೆಂದು ಭಾವಿಸಿದರೆ, ಆ ಸದಸ್ಯರಲ್ಲಿ ಒಬ್ಬರನ್ನು ಯೋಜನಾ ಪ್ರಾಧಿಕಾರದ ಉಪಾಧ್ಯಕ್ಷನೆಂದು ನೇಮಕ ಮಾಡಬಹುದು.

**4ಡಿ. ಯೋಜನಾ ಪ್ರಾಧಿಕಾರಗಳ ಅಧ್ಯಕ್ಷರು ಮತ್ತು ಸದಸ್ಯರ ಪದಾವಧಿ ಮತ್ತು ಸೇವಾ ಷರತ್ತುಗಳು:–** (1) (2)ನೇ ಉಪಪ್ರಕರಣದ ಉಪಬಂಧಗಳಿಗೊಳಪಟ್ಟು, 4ಸಿ ಪ್ರಕರಣದ ಮೇರೆಗೆ ರಚಿಸಿದ ಯೋಜನಾ ಪ್ರಾಧಿಕಾರದ ಅಧ್ಯಕ್ಷರು ಮತ್ತು ಸದಸ್ಯರ ಪದಾವಧಿ ಮತ್ತು ಸೇವಾ ಷರತ್ತುಗಳು, ನಿಯಮಿಸಬಹುದಾದಂಥವುಗಳು ಆಗಿರತಕ್ಕದ್ದು ಮತ್ತು ಅವರು ರಾಜ್ಯ ಸರ್ಕಾರವು ನಿಗದಿಪಡಿಸಬಹುದಾದಂಥ ಭತ್ಯೆಗಳನ್ನು ಸ್ವೀಕರಿಸಲು ಹಕ್ಕುಳ್ಳವರಾಗಿರತಕ್ಕದ್ದು.

(2) 4ಸಿ ಪ್ರಕರಣದ ಮೇರೆಗೆ ರಚಿಸಿದ ಯೋಜನಾ ಪ್ರಾಧಿಕಾರದ ಅಧ್ಯಕ್ಷರು ಮತ್ತು ಸದಸ್ಯರು, ಸ್ಥಳೀಯ ಪ್ರಾಧಿಕಾರಗಳು ನಾಮನಿರ್ದೇಶನ ಮಾಡಿದವರನ್ನು ಹೊರತುಪಡಿಸಿ, ರಾಜ್ಯ ಸರ್ಕಾರದ ಇಷ್ಟಪರ್ಯಂತ ಪದಧಾರಣ ಮಾಡತಕ್ಕದ್ದು. ಆ ಪ್ರಾಧಿಕಾರದ ಸದಸ್ಯನಾಗಿರುವ ಸ್ಥಳೀಯ ಪ್ರಾಧಿಕಾರದ ಪ್ರತಿನಿಧಿಯು, ಅವರು ಸಂಬಂಧಪಟ್ಟ ಸ್ಥಳೀಯ ಪ್ರಾಧಿಕಾರದ ಸದಸ್ಯನಾಗಿರುವುದು ನಿಂತುಹೋದಾಗ, ಆ ಯೋಜನಾ ಪ್ರಾಧಿಕಾರದ ಸದಸ್ಯನಾಗಿರುವುದೂ ನಿಂತುಹೋಗತಕ್ಕದ್ದು.

(3) ಅಧ್ಯಕ್ಷರು ಅಥವಾ ಯಾರೇ ಸದಸ್ಯರು, ಆ ಯೋಜನಾ ಪ್ರಾಧಿಕಾರದ ತನ್ನ ಸದಸ್ಯತ್ವಕ್ಕೆ, ರಾಜ್ಯ ಸರ್ಕಾರಕ್ಕೆ ಲಿಖಿತದಲ್ಲಿ ನೋಟೀಸನ್ನು ಕೊಡುವ ಮೂಲಕ ರಾಜೀನಾಮೆಯನ್ನು ಕೊಡಬಹುದು ಮತ್ತು ಅಂಥ ರಾಜೀನಾಮೆಯನ್ನು ಅಂಗೀಕರಿಸಿದ ತರುವಾಯ ಅವರು ಆ ಯೋಜನಾ ಪ್ರಾಧಿಕಾರದ ಸದಸ್ಯನಾಗಿರುವುದು ನಿಂತು ಹೋಗತಕ್ಕದ್ದು.

(4) ಯಾವುವೇ ಖಾಲಿ ಸ್ಥಾನಗಳನ್ನು, ಸಂದರ್ಭಾನುಸಾರ ರಾಜ್ಯ ಸರ್ಕಾರವು ಹೊಸದಾಗಿ ನೇಮಕ ಮಾಡುವ ಮೂಲಕ ಅಥವಾ ಸಂಬಂಧಪಟ್ಟ ಸ್ಥಳೀಯ ಪ್ರಾಧಿಕಾರವು ನಾಮನಿರ್ದೇಶನ ಮಾಡುವ ಮೂಲಕ ಭರ್ತಿ ಮಾಡತಕ್ಕದ್ದು.

**4ಇ. ಯೋಜನಾ ಪ್ರಾಧಿಕಾರಗಳ ಸಭೆಗಳು:–** (1) 4ಸಿ ಪ್ರಕರಣದ ಮೇರೆಗೆ ರಚಿಸಿದ ಪ್ರತಿಯೊಂದು ಯೋಜನಾ ಪ್ರಾಧಿಕಾರವು, ನಿಯಮಿಸಬಹುದಾದಂಥ ಕಾಲಗಳಲ್ಲಿ ಮತ್ತು ಸ್ಥಳಗಳಲ್ಲಿ ಸಭೆ ಸೇರತಕ್ಕದ್ದು ಮತ್ತು (2)ನೇ ಮತ್ತು (3)ನೇ ಉಪಪ್ರಕರಣಗಳ ಉಪಬಂಧಗಳಿಗೆ ಒಳಪಟ್ಟು, ಅದರ ಸಭೆಗಳಲ್ಲಿನ ಕಾರ್ಯಕಲಾಪವನ್ನು ನಡೆಸುವ ಬಗ್ಗೆ ಅಂಥ ಪ್ರಕ್ರಿಯೆಯನ್ನು ಪಾಲಿಸತಕ್ಕದ್ದು.

(2) ಅಧ್ಯಕ್ಷರು ಅಥವಾ ಅವರ ಗೈರು ಹಾಜರಿಯಲ್ಲಿ ಉಪಾಧ್ಯಕ್ಷರು ಯಾರಾದರೂ ಇದ್ದರೆ, ಅವರು, ಅಥವಾ ಅಧ್ಯಕ್ಷರ ಮತ್ತು ಉಪಾಧ್ಯಕ್ಷರ ಗೈರು ಹಾಜರಿಯಲ್ಲಿ ಸದಸ್ಯರು ತಮ್ಮೊಳಗಿಂದ ಆಯ್ಕೆ ಮಾಡಿದ ಯಾರೇ ಸದಸ್ಯರು ಅಂಥ ಯೋಜನಾ ಪ್ರಾಧಿಕಾರದ ಸಭೆಯ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(3) ಅಂಥ ಯೋಜನಾ ಪ್ರಾಧಿಕಾರದ ಸಭೆಯಲ್ಲಿ ಬರುವ ಎಲ್ಲಾ ಪ್ರಶ್ನೆಗಳನ್ನು, ಹಾಜರಿದ್ದು ಮತ ನೀಡುವ ಸದಸ್ಯರ ಬಹುಮತದ ಮೂಲಕ ತೀರ್ಮಾನಿಸತಕ್ಕದ್ದು ಮತ್ತು ಸಮಾನ ಮತಗಳು ಬಂದ ಸಂದರ್ಭದಲ್ಲಿ, ಅಧ್ಯಕ್ಷತೆಯನ್ನು ವಹಿಸಿದ ವ್ಯಕ್ತಿಯು ಎರಡನೇ ಅಥವಾ ನಿರ್ಣಾಯಕ ಮತವನ್ನು ಹೊಂದಿರತಕ್ಕದ್ದು.

(4) ಪ್ರತಿಯೊಂದು ಸಭೆಯಲ್ಲಿ ಹಾಜರಿದ್ದ ಸದಸ್ಯರ ಹೆಸರುಗಳನ್ನು ಮತ್ತು ಆ ವ್ಯವಹರಣೆಗಳನ್ನು ಈ ಉದ್ದೇಶಕ್ಕಾಗಿ ಇಟ್ಟಿರುವ ನಡವಳಿ ಪುಸ್ತಕದಲ್ಲಿ ಬರೆದಿಡತಕ್ಕದ್ದು, ಮತ್ತು ಅದು ಕಛೇರಿ ವೇಳೆಯಲ್ಲಿ ಯಾರೇ ಸದಸ್ಯನ ಪರಿಶೀಲನೆಗೆ ಮುಕ್ತವಾಗಿರತಕ್ಕದ್ದು.

**4ಎಫ್. ನಿರ್ದಿಷ್ಟ ಉದ್ದೇಶಗಳಿಗಾಗಿ ಯೋಜನಾ ಪ್ರಾಧಿಕಾರದೊಡನೆ ವ್ಯಕ್ತಿಗಳು ತಾತ್ಕಾಲಿಕವಾಗಿ ಸಹವರ್ತಿಯಾಗಿರುವುದು:–** (1) ಪ್ರತಿಯೊಂದು ಯೋಜನಾ ಪ್ರಾಧಿಕಾರವು, ನಿಯಮಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಉದ್ದೇಶಗಳಿಗಾಗಿ ಈ ಅಧಿನಿಯಮದ ಮೇರೆಗಿನ ಅದರ ಯಾವುದೇ

ಪ್ರಕಾರ್ಯವನ್ನು ನೆರವೇರಿಸುವಲ್ಲಿ ಯಾರ ಸಹಾಯವನ್ನು ಅಥವಾ ಸಲಹೆಯನ್ನು ಅದು ಅಪೇಕ್ಷಿಸಬಹುದೋ ಆ ಯಾರೇ ವ್ಯಕ್ತಿಯನ್ನು ತನ್ನೊಂದಿಗೆ ಸಹವರ್ತಿಯಾಗಿ ಸೇರಿಸಿಕೊಳ್ಳಬಹುದು.

(2) ಯಾವುದೇ ಉದ್ದೇಶಕ್ಕಾಗಿ, (1)ನೇ ಉಪಪ್ರಕರಣದ ಮೇರೆಗೆ ಯೋಜನಾ ಪ್ರಾಧಿಕಾರವು, ತನ್ನೊಂದಿಗೆ ಸಹವರ್ತಿಯಾದ ಯಾರೇ ವ್ಯಕ್ತಿಯು ಆ ಉದ್ದೇಶಕ್ಕೆ ಸುಸಂಗತವಾಗುವ ಯೋಜನಾ ಪ್ರಾಧಿಕಾರದ ಚರ್ಚೆಗಳಲ್ಲಿ ಭಾಗವಹಿಸಲು ಹಕ್ಕನ್ನು ಹೊಂದಿರತಕ್ಕದ್ದು. ಆದರೆ ಸಭೆಯಲ್ಲಿ ಮತ ನೀಡುವ ಹಕ್ಕನ್ನು ಹೊಂದಿರತಕ್ಕದ್ದಲ್ಲ.

**4ಜಿ. ಯೋಜನಾ ಪ್ರಾಧಿಕಾರದ ಸಿಬ್ಬಂದಿ:–** (1) ನಿಯಮಿಸಬಹುದಾದಂಥ ನಿಯಂತ್ರಣಕ್ಕೆ ಮತ್ತು ನಿರ್ಬಂಧಗಳಿಗೆ ಒಳಪಟ್ಟು, 4ಸಿ ಪ್ರಕರಣದ ಮೇರೆಗೆ ರಚಿಸಿದ ಯೋಜನಾ ಪ್ರಾಧಿಕಾರವು, ತನ್ನ ಪ್ರಕಾರ್ಯಗಳ ದಕ್ಷ ನೆರವೇರಿಕೆಗಾಗಿ ಅವಶ್ಯವಿರಬಹುದಾದಷ್ಟು ಸಂಖ್ಯೆಯ ಅಧಿಕಾರಿಗಳನ್ನು ಮತ್ತು ನೌಕರರನ್ನು ನೇಮಕ ಮಾಡಬಹುದು ಮತ್ತು ಅವರ ಪದನಾಮಗಳನ್ನು ಮತ್ತು ದರ್ಜೆಗಳನ್ನು ನಿರ್ಧರಿಸಬಹುದು.

(2) ಅಂಥ ಯೋಜನಾ ಪ್ರಾಧಿಕಾರದ ಅಧಿಕಾರಿಗಳು ಮತ್ತು ನೌಕರರು ಆ ಯೋಜನಾ ಪ್ರಾಧಿಕಾರವು ನಿಗದಿಪಡಿಸಬಹುದಾದಂಥ ಸಂಬಳಗಳನ್ನು ಮತ್ತು ಭತ್ಯಗಳನ್ನು ಸ್ವೀಕರಿಸಲು ಹಕ್ಕುಳ್ಳವರಾಗಿರತಕ್ಕದ್ದು ಮತ್ತು ಅವರು ನಿಯಮಿಸಬಹುದಾದಂಥ ಸೇವಾ ನಿಬಂಧನೆಗಳಿಗೆ ಮತ್ತು ಷರತ್ತುಗಳಿಗೆ ಒಳಪಟ್ಟಿರತಕ್ಕದ್ದು.

[1][**4ಹೆಚ್. ಯೋಜನಾ ಪ್ರಾಧಿಕಾರದ ಸದಸ್ಯ–ಕಾರ್ಯದರ್ಶಿಯ ಪ್ರಕಾರ್ಯಗಳು:–** (1) ಯೋಜನಾ ಪ್ರಾಧಿಕಾರದ ಸಾಮಾನ್ಯ ಅಧಿಕಾರಗಳಿಗೊಳಪಟ್ಟು ಮತ್ತು ಈ ಅಧಿನಿಯಮದ ಮೇರೆಗೆ ಅಧ್ಯಕ್ಷನ ಅಧಿಕಾರಗಳಿಗೆ ಬಾಧಕವಾಗದಂತೆ ಯೋಜನಾ ಪ್ರಾಧಿಕಾರದ ಸದಸ್ಯ–ಕಾರ್ಯದರ್ಶಿಯು,–

(ಎ) ಯೋಜನಾ ಪ್ರಾಧಿಕಾರದ ಮುಖ್ಯ ನಿರ್ವಾಹಕ ಮತ್ತು ತಾಂತ್ರಿಕ ಅಧಿಕಾರಿಯಾಗಿರತಕ್ಕದ್ದು;

(ಬಿ) ಯೋಜನಾ ಪ್ರಾಧಿಕಾರದ ಎಲ್ಲ ಆಯವ್ಯಯ, ಯೋಜನೆ, ಅನುಷ್ಠಾನ ಮತ್ತು ಮೇಲ್ವಿಚಾರಣೆ - ಪ್ರಕಾರ್ಯಗಳಿಗೆ ಜವಾಬ್ದಾರನಾಗಿರತಕ್ಕದ್ದು;

(ಸಿ) ಯೋಜನಾ ಪ್ರಾಧಿಕಾರದ ಆಡಳಿತ ಮತ್ತು ಲೆಕ್ಕಗಳಿಗೆ ಹಾಗೂ ಇತರ ವಿಷಯಗಳಿಗೆ ಸಂಬಂಧಿಸಿದ ಎಲ್ಲಾ ಮಾಹಿತಿಯನ್ನು ಒದಗಿಸುವಂತೆ ಪ್ರಾಧಿಕಾರವು ಕೇಳಿದಾಗಲೆಲ್ಲಾ ಆ ಮಾಹಿತಿಯನ್ನು ಅದಕ್ಕೆ ಒದಗಿಸತಕ್ಕದ್ದು;

(ಡಿ) ಪ್ರತಿಯೊಂದು ಹಣಕಾಸು ವರ್ಷದ ಮುಕ್ತಾಯದ ಮೂರು ತಿಂಗಳೊಳಗೆ ಯೋಜನಾ ಪ್ರಾಧಿಕಾರದ ವಾರ್ಷಿಕ ವರದಿಗಳನ್ನು ಮತ್ತು ಪರಿಶೋಧಿತ ಲೆಕ್ಕಗಳನ್ನು ಅದರ ಅನುಮೋದನೆಗಾಗಿ ಸಿದ್ದಪಡಿಸಿ ಒಪ್ಪಿಸತಕ್ಕದ್ದು ಮತ್ತು ಆ ತರುವಾಯ ಅವುಗಳ ಪ್ರತಿಗಳನ್ನು ಮಂಡಲಿಗೆ, ನಿರ್ದೇಶಕನಿಗೆ ಮತ್ತು ರಾಜ್ಯ ಸರ್ಕಾರಕ್ಕೆ ಒಪ್ಪಿಸತಕ್ಕದ್ದು.

(2) ಯೋಜನಾ ಪ್ರಾಧಿಕಾರವು ಅಂಗೀಕರಿಸಿದ ಯಾವುದೇ ನಿರ್ಣಯವು ಈ ಅಧಿನಿಯಮದ ಅಥವಾ ಯಾವುದೇ ಇತರ ಕಾನೂನಿನ ಅಥವಾ ಅವುಗಳ ಮೇರೆಗೆ ರಚಿಸಲಾದ ಅಥವಾ ಹೊರಡಿಸಲಾದ ಯಾವುದೇ ನಿಯಮದ, ಅಧಿಸೂಚನೆಯ, ವಿನಿಯಮನದ ಅಥವಾ ಉಪವಿಧಿಯ ಅಥವಾ ರಾಜ್ಯ ಸರ್ಕಾರವು ಹೊರಡಿಸಿದ ಯಾವುದೇ ಆದೇಶದ ಯಾವುವೇ ಉಪಬಂಧಗಳನ್ನು ಉಲ್ಲಂಘಿಸಿರುವುದಾಗಿ ಅಥವಾ ಆ ನಿರ್ಣಯವು ಯೋಜನಾ ಪ್ರಾಧಿಕಾರದ ಹಿತಾಸಕ್ತಿಗೆ ಪ್ರತಿಕೂಲವಾಗಿರುವುದಾಗಿ ಅಥವಾ ಬಾಧಕವಾಗಿರುವುದಾಗಿ ಸದಸ್ಯ–ಕಾರ್ಯದರ್ಶಿಯು ಅಭಿಪ್ರಾಯಪಟ್ಟಲ್ಲಿ, ಅವನು, ಅಂಥ ನಿರ್ಣಯವನ್ನು ಅಂಗೀಕರಿಸಿದ ದಿನಾಂಕದಿಂದ ಹದಿನೈದು ದಿವಸಗಳೊಳಗೆ, ನಿರ್ದೇಶಕನ ಮೂಲಕ ಆ ವಿಷಯವನ್ನು ರಾಜ್ಯ ಸರ್ಕಾರಕ್ಕೆ ಆದೇಶಗಳಿಗಾಗಿ ಒಪ್ಪಿಸತಕ್ಕದ್ದು ಮತ್ತು ತಾನು ತೆಗೆದುಕೊಂಡ ಕ್ರಮದ ಬಗ್ಗೆ ಯೋಜನಾ ಪ್ರಾಧಿಕಾರದ ಮುಂದಿನ ಸಭೆಯಲ್ಲಿ ಅದಕ್ಕೆ ತಿಳಿಸತಕ್ಕದ್ದು ಮತ್ತು ಆ ಬಗ್ಗೆ ರಾಜ್ಯ ಸರ್ಕಾರದ ಆದೇಶ ಬರುವವರೆಗೆ ಯೋಜನಾ ಪ್ರಾಧಿಕಾರದ ಸದಸ್ಯ–ಕಾರ್ಯದರ್ಶಿಯು ಆ ನಿರ್ಣಯವನ್ನು ಜಾರಿಗೊಳಿಸುವುದಕ್ಕೆ ಬದ್ಧನಾಗಿರತಕ್ಕದ್ದಲ್ಲ.][1]

1. 1991 ರ ಅಧಿನಿಯಮ ಸಂ.17ರ ಮೂಲಕ 19-4-91ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

## ಅಧ್ಯಾಯ - II

## ಸದ್ಯದ ಭೂಬಳಕೆ

**5. ದಿನಾಂಕವನ್ನು ನಿರ್ದಿಷ್ಟಪಡಿಸುವುದು:–** ರಾಜ್ಯ ಸರ್ಕಾರವು, ಅಧಿಸೂಚನೆ ಮೂಲಕ ರಾಜ್ಯದಲ್ಲಿನ ಯಾವುದೇ ಭೂಮಿಯ ಸದ್ಯದ ಭೂಬಳಕೆಯನ್ನು ಯಾವ ದಿನಾಂಕವನ್ನು ಉಲ್ಲೇಖಿಸಿ ನಿರ್ಧರಿಸಬೇಕಾಗಿದೆಯೋ ಆ ದಿನಾಂಕವನ್ನು ನಿರ್ದಿಷ್ಟಪಡಿಸತಕ್ಕದ್ದು ಮತ್ತು ರಾಜ್ಯದಲ್ಲಿನ ಬೇರೆ ಬೇರೆ ಪ್ರದೇಶಗಳಿಗಾಗಿ ಬೇರೆ ಬೇರೆ ದಿನಾಂಕಗಳನ್ನು ನಿಗದಿಪಡಿಸಬಹುದು.

**6. ಸದ್ಯದ ಭೂಬಳಕೆಯನ್ನು ತೋರಿಸುವ ನಕಾಶೆಯ ತಯಾರಿಕೆ:–** ಪ್ರತಿಯೊಂದು ಯೋಜನಾ ಪ್ರಾಧಿಕಾರವು, ಸಾಧ್ಯವಾದಷ್ಟು ಬೇಗನೆ ಮತ್ತು 5ನೇ ಪ್ರಕರಣದ ಮೇರೆಗೆ ನಿರ್ದಿಷ್ಟ ಪಡಿಸಿದ ದಿನಾಂಕದ ತರುವಾಯ ಎರಡು ವರ್ಷಗಳನ್ನು ಮೀರದಂತೆ ಅದರ ಅಧಿಕಾರ ವ್ಯಾಪ್ತಿಯೊಳಗಿನ ಯೋಜನಾ ಪ್ರದೇಶದಲ್ಲಿನ [1][***] ಸದ್ಯದ ಭೂಬಳಕೆಯನ್ನು ಮತ್ತು ನಿಯಮಿಸಬಹುದಾದಂಥ ಇತರ ವಿವರಗಳನ್ನು ತೋರಿಸುವ ನಿಖರವಾದ ನಕಾಶೆಯನ್ನು ತಯಾರಿಸತಕ್ಕದ್ದು. ಅಂಥ ನಕಾಶೆಯ ಒಂದು ಪ್ರತಿಯನ್ನು ನಿರ್ದೇಶಕನಿಗೆ ಕಳುಹಿಸತಕ್ಕದ್ದು ಮತ್ತು ಇನ್ನೊಂದು ಪ್ರತಿಯನ್ನು ಆ ಯೋಜನಾ ಪ್ರಾಧಿಕಾರದ ಕಚೇರಿಯಲ್ಲಿ ಸಾರ್ವಜನಿಕರ ಮಾಹಿತಿಗಾಗಿ ಪ್ರದರ್ಶಿಸತಕ್ಕದ್ದು.

1. 1964 ರ ಅಧಿನಿಯಮ ಸಂ.14ರ ಮೂಲಕ 26.3.1964 ರಿಂದ ಬಿಟ್ಟು ಬಿಡಲಾಗಿದೆ.

**7. ನಕಾಶೆಯಲ್ಲಿನ ನಮೂದುಗಳನ್ನು ಸರಿಪಡಿಸುವುದಕ್ಕಾಗಿ ಅರ್ಜಿ:–** (1) 6ನೇ ಪ್ರಕರಣದ ಮೇರೆಗೆ ತಯಾರಿಸಿದ ನಕಾಶೆಯಲ್ಲಿ ಸೇರಿಸಿರುವ ಭೂಮಿಯ ಯಾವುದೇ ಪ್ಲಾಟಿನ ಒಡೆಯನು, ಆ ಯೋಜನಾ ಪ್ರಾಧಿಕಾರದ ಕಚೇರಿಯಲ್ಲಿ ಅದನ್ನು ಪ್ರಕಟಿಸಿದ ಒಂದು ತಿಂಗಳೊಳಗೆ ಆ ನಕಾಶೆಯಲ್ಲಿ ಭೂಬಳಕೆ ಬಗ್ಗೆ ಮಾಡಿರುವ ಯಾವುದೇ ನಮೂದನ್ನು ಅಥವಾ ಇತರ ವಿವರಗಳನ್ನು ಸರಿಪಡಿಸುವುದಕ್ಕಾಗಿ ಅಂಥ ಪ್ರಾಧಿಕಾರಕ್ಕೆ ಅರ್ಜಿಯನ್ನು ಸಲ್ಲಿಸಬಹುದು.

(2) ಅಂಥ ಅರ್ಜಿಯನ್ನು ಸ್ವೀಕರಿಸಿದ ಮೇಲೆ, ಆ ಯೋಜನಾ ಪ್ರಾಧಿಕಾರವು ಅಥವಾ ಅದು ನೇಮಕ ಮಾಡಿದ ಅಂಥ ಪ್ರಾಧಿಕಾರದ ಯಾರೇ ಅಧಿಕಾರಿಯು, ನಿಯಮಿಸಬಹುದಾದಂಥ ವಿಚಾರಣೆಯನ್ನು ಮಾಡಿದ ತರುವಾಯ, ಆ ನಮೂದು ಸರಿಯಾಗಿಲ್ಲದಿದ್ದರೆ ಆದೇಶವನ್ನು ಮಾಡತಕ್ಕದ್ದು ಮತ್ತು ಅದು ಸರಿಯಾಗಿಲ್ಲವೆಂದು ಕಂಡುಬಂದರೆ ಅದನ್ನು ಸರಿಪಡಿಸಬೇಕೆಂದು ನಿರ್ದೇಶಿಸತಕ್ಕದ್ದು.

(3) ಉಪಪ್ರಕರಣ(2)ರ ಮೇರೆಗೆ ಆದೇಶ ಮಾಡಿದಾಗ, ಆ ಆದೇಶದ ದಿನಾಂಕದಿಂದ ಅರವತ್ತು ದಿವಸಗಳೊಳಗೆ, ನಿಯಮಿಸಿದ ಪ್ರಾಧಿಕಾರಕ್ಕೆ, ಅಥವಾ ಯಾವುದೇ ಪ್ರಾಧಿಕಾರವನ್ನು ನಿಯಮಿಸಿಲ್ಲದಿದ್ದರೆ, ರಾಜ್ಯ ಸರ್ಕಾರಕ್ಕೆ ಅಪೀಲು ಸಲ್ಲಿಸಲು ಅವಕಾಶವಿರತಕ್ಕದ್ದು ಮತ್ತು ಅಪೀಲಿನಲ್ಲಿ, ನಿಯಮಿಸಿದ ಪ್ರಾಧಿಕಾರದ ಅಥವಾ ರಾಜ್ಯ ಸರ್ಕಾರದ ಆದೇಶವು ಅಂತಿಮವಾಗಿರತಕ್ಕದ್ದು.

**8. ನಕಾಶೆಯಲ್ಲಿನ ನಮೂದುಗಳು 7ನೇ ಪ್ರಕರಣದ ಮೇರೆಗಿನ ಆದೇಶಗಳಿಗೆ ಒಳಪಟ್ಟು ನಿರ್ಣಾಯಕ ಸಾಕ್ಷ್ಯವಾಗಿರತಕ್ಕದ್ದು:–** 7ನೇ ಪ್ರಕರಣದ ಮೇರೆಗೆ ಮಾಡಬಹುದಾದ ಯಾವುದೇ ಆದೇಶಕ್ಕೆ ಒಳಪಟ್ಟು, 6ನೇ ಪ್ರಕರಣದ ಮೇರೆಗೆ ಆ ನಕಾಶೆಯಲ್ಲಿ ಮಾಡಲಾಗಿರುವ ಸದ್ಯದ ಭೂಬಳಕೆಯ ಬಗ್ಗೆ ಮಾಡಿರುವ ಮತ್ತು ನಿಯಮಿಸಿದ ಇತರ ವಿವರಗಳ ಬಗೆಗಿನ ಎಲ್ಲಾ ನಮೂದುಗಳು ಆ ನಿರ್ದಿಷ್ಟಪಡಿಸಿದ ದಿನಾಂಕದಂದು ಅಂಥ ನಮೂದುಗಳ ಸರಿತನದ ಬಗ್ಗೆ ನಿರ್ಣಾಯಕ ಸಾಕ್ಷ್ಯವಾಗಿರತಕ್ಕದ್ದು.

## ಅಧ್ಯಾಯ – III

## ಸ್ಥೂಲ ಅಭಿವೃದ್ಧಿ ಯೋಜನೆ

[1][**9. ಬೃಹತ್ ಯೋಜನೆಯನ್ನು ತಯಾರಿಸುವುದು:–** (1) ಪ್ರತಿಯೊಂದು ಯೋಜನಾ ಪ್ರಾಧಿಕಾರವು, ಸಾಧ್ಯವಾದಷ್ಟು ಬೇಗನೆ, ಅದರ ಅಧಿಕಾರ ವ್ಯಾಪ್ತಿಯಲ್ಲಿನ ಪ್ರದೇಶದ ಸಮೀಕ್ಷೆಯನ್ನು ನಡೆಸತಕ್ಕದ್ದು ಮತ್ತು ಸ್ಥಳೀಯ ಯೋಜನಾ ಪ್ರದೇಶವನ್ನು ಘೋಷಿಸಿದ ದಿನಾಂಕದಿಂದ ಎರಡು ವರ್ಷಗಳು ಮೀರದಂತೆ ಅಂಥ ಪ್ರದೇಶಕ್ಕಾಗಿ ಬೃಹತ್ ಯೋಜನೆಯನ್ನು ಗೊತ್ತುಪಡಿಸಿದ ರೀತಿಯಲ್ಲಿ ತಯಾರಿಸತಕ್ಕದ್ದು ಮತ್ತು ಪ್ರಕಟಿಸತಕ್ಕದ್ದು ಮತ್ತು ನಿರ್ದೇಶಕರ ಮೂಲಕ ಅದನ್ನು ತಾತ್ಕಾಲಿಕ ಅನುಮೋದನೆಗಾಗಿ, ರಾಜ್ಯ ಸರ್ಕಾರಕ್ಕೆ ಒಪ್ಪಿಸತಕ್ಕದ್ದು.

(2) ಆ ಬೃಹತ್ ಅಭಿವೃದ್ಧಿ ಯೋಜನೆಯನ್ನು, (1)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ ಯೋಜನಾ ಪ್ರಾಧಿಕಾರವು ತಯಾರಿಸದಿದ್ದರೆ, ಪ್ರಕಟಿಸದಿದ್ದರೆ ಮತ್ತು ಅದನ್ನು ರಾಜ್ಯ ಸರ್ಕಾರಕ್ಕೆ ಒಪ್ಪಿಸದಿದ್ದರೆ, ರಾಜ್ಯ ಸರ್ಕಾರವು, ನಿಯಮಿಸಿದ ರೀತಿಯಲ್ಲಿ ಅಂಥ ಯೋಜನೆಯನ್ನು ತಯಾರಿಸಲು ಮತ್ತು ಪ್ರಕಟಿಸಲು ನಿರ್ದೇಶಕರನ್ನು ಅಧಿಕೃತಗೊಳಿಸಬಹುದು ಮತ್ತು ಅದರ ಖರ್ಚನ್ನು, ಯೋಜನಾ ಪ್ರಾಧಿಕಾರದ ಅದರ ನಿಧಿಗಳಿಂದ, ಸದರಿ ನಿಧಿಗೆ ಸಂಬಂಧಪಟ್ಟಂತೆ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ವಸೂಲು ಮಾಡಲು ನಿರ್ದೇಶಿಸಬಹುದು.

(3) (2)ನೇ ಉಪಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಯಾವುದೇ ಯೋಜನಾ ಪ್ರಾಧಿಕಾರವನ್ನು, ಯಾವುದೇ ಇತರ ಯೋಜನಾ ಪ್ರಾಧಿಕಾರವನ್ನಾಗಿ ಪರಿವರ್ತಿಸಿದರೆ ಅಥವಾ ಯಾವುದೇ ಯೋಜನಾ ಪ್ರಾಧಿಕಾರವನ್ನು ಇತರ ಯೋಜನಾ ಪ್ರಾಧಿಕಾರದೊಂದಿಗೆ ಅದನ್ನು ವಿಲೀನಗೊಳಿಸಿದರೆ ಅಥವಾ ಅದನ್ನು ಎರಡು ಅಥವಾ ಹೆಚ್ಚು ಯೋಜನಾ ಪ್ರಾಧಿಕಾರಗಳನ್ನಾಗಿ ಒಳವಿಭಾಗ ಮಾಡಿದರೆ, ಹಾಗೆ ಪರಿವರ್ತಿತವಾದ, ವಿಲೀನಗೊಂಡ ಅಥವಾ ಒಳವಿಭಾಗವಾದ ಯೋಜನಾ ಪ್ರಾಧಿಕಾರವು ಆ ಪ್ರದೇಶಕ್ಕಾಗಿ ತಯಾರಿಸಿದ ಬೃಹತ್ ಯೋಜನೆಯನ್ನು, ರಾಜ್ಯ ಸರ್ಕಾರವು ಅನುಮೋದಿಸಬಹುದಾದಂಥ ಬದಲಾವಣೆಗಳು ಮತ್ತು ಮಾರ್ಪಾಟುಗಳೊಂದಿಗೆ, ಯಾವುದನ್ನಾಗಿ ಅಥವಾ ಯಾವುದರೊಂದಿಗೆ ಆ ಹಿಂದಿನ ಯೋಜನಾ ಪ್ರಾಧಿಕಾರವನ್ನು ಪರಿವರ್ತಿಸಲಾಗಿತ್ತೋ, ವಿಲೀನಗೊಂಡಿತ್ತೋ ಅಥವಾ ಒಳವಿಭಾಗವಾಗಿತ್ತೋ ಆ ಹೊಸ ಯೋಜನಾ ಪ್ರಾಧಿಕಾರದ ಅಥವಾ ಪ್ರಾಧಿಕಾರಗಳ ಪ್ರದೇಶಕ್ಕಾಗಿ ಬೃಹತ್ ಯೋಜನೆಯಾಗಿರುವುದಾಗಿ ಭಾವಿಸತಕ್ಕದ್ದು.

(4) (1)ನೇ ಉಪಪ್ರಕರಣದ ಅಥವಾ (3)ನೇ ಉಪಪ್ರಕರಣದ ಮೇರೆಗೆ ರಾಜ್ಯ ಸರ್ಕಾರಕ್ಕೆ ಕಳುಹಿಸಿದ ವರದಿಯೊಂದಿಗೆ ಬೃಹತ್ ಯೋಜನೆಯ ಒಂದು ಪ್ರತಿಯನ್ನು ಯೋಜನಾ ಪ್ರಾಧಿಕಾರದ ಪ್ರಧಾನ ಕಚೇರಿಯಲ್ಲಿ ಸಾರ್ವಜನಿಕರ ಪರಿಶೀಲನೆಗಾಗಿ ಮುಕ್ತವಾಗಿ ಇಟ್ಟಿರತಕ್ಕದ್ದು.][1]

1. 2005ರ ಅಧಿನಿಯಮ ಸಂಖ್ಯೆ 1ರ ಮೂಲಕ 14–2–2005ರಿಂದ ಜಾರಿಗೆ ಬರುವಂತೆ 9ನೇ ಪ್ರಕರಣವನ್ನು ಪ್ರತಿಯೋಜಿಸಲಾಗಿದೆ.

**10. ಸ್ಥೂಲ ಅಭಿವೃದ್ಧಿ ಯೋಜನೆಯನ್ನು ಸಿದ್ಧಪಡಿಸುವ ಉದ್ದೇಶದ ಬಗ್ಗೆ ಘೋಷಣೆ:–** [1][(1) ಯೋಜನಾ ಪ್ರಾಧಿಕಾರವು, ಅಂಥ ಪ್ರದೇಶಕ್ಕಾಗಿ ಬೃಹತ್ ಯೋಜನೆಯನ್ನು ತಯಾರಿಸುವ ಉದ್ದೇಶಕ್ಕಾಗಿ, 9ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ತನ್ನ ಅಧಿಕಾರ ವ್ಯಾಪ್ತಿಯೊಳಗೆ ಇರುವ ಪ್ರದೇಶದ ಮೋಜಣಿಯನ್ನು ನಡೆಸುವುದಕ್ಕೆ ಮುಂಚೆ, ಅಂಥ ಯೋಜನೆಯ ತಯಾರಿಕೆಯ ಉದ್ದೇಶದ ಬಗ್ಗೆ ಘೋಷಣೆಯನ್ನು ಮಾಡತಕ್ಕದ್ದು ಮತ್ತು ಬೃಹತ್ ಯೋಜನೆಯಲ್ಲಿ ಸೇರಿಸಲು ಉದ್ದೇಶಿಸಿದ ಸಂಪೂರ್ಣ ಪ್ರದೇಶದ ಸರಹದ್ದನ್ನು ಮಾತ್ರ ತೋರಿಸುವ ನಕ್ಷೆಯ ಒಂದು ಪ್ರತಿಯೊಂದಿಗೆ ಅಂಥ ನಿರ್ಣಯದ ಒಂದು ಪ್ರತಿಯನ್ನು ರಾಜ್ಯಸರ್ಕಾರಕ್ಕೆ ರವಾನಿಸತಕ್ಕದ್ದು. ಯೋಜನಾ ಪ್ರಾಧಿಕಾರವು, ಅಂಥ ಘೋಷಣೆಯ ಟಿಪ್ಪಣಿಯನ್ನು ರಾಜ್ಯಪತ್ರದಲ್ಲಿ ಪ್ರಕಟಿಸತಕ್ಕದ್ದು, ಅಲ್ಲದೆ ಅರವತ್ತು ದಿನಗಳ ಅವಧಿಯೊಳಗೆ ಗೊತ್ತುಪಡಿಸಿದ ರೀತಿಯಲ್ಲಿ ಸಾರ್ವಜನಿಕರಿಂದ ಸಲಹೆ ಸೂಚನೆಗಳನ್ನು ಆಹ್ವಾನಿಸಿ ಒಂದು ಅಥವಾ ಹೆಚ್ಚು ಸ್ಥಳೀಯ ಸುದ್ದಿ ಪತ್ರಿಕೆಯಲ್ಲಿ ಪ್ರಕಟಿಸತಕ್ಕದ್ದು:

ಪರಂತು, 9ನೇ ಪ್ರಕರಣದ (2)ನೇ ಉಪಪ್ರಕರಣದ ಮೇರೆಗೆ ನಿರ್ದೇಶಕರು ಆ ಬೃಹತ್ ಯೋಜನೆಯನ್ನು ತಯಾರಿಸಿದಾಗ ಮತ್ತು ಪ್ರಕಟಿಸಿದಾಗ ಉದ್ದೇಶದ ಬಗ್ಗೆ ಯಾವುದೇ ಅಂಥ ಘೋಷಣೆಯನ್ನು ಮಾಡುವ ಅವಶ್ಯಕತೆಯಿಲ್ಲ.][1]

1. 2005ರ ಅಧಿನಿಯಮ ಸಂಖ್ಯೆ 1ರ ಮೂಲಕ 14–2–2005ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) (1)ನೇ ಉಪಪ್ರಕರಣದ ಮೇರೆಗಿನ ಘೋಷಣೆಯನ್ನು ಪ್ರಕಟಿಸಿದ ದಿನಾಂಕದಿಂದ ಎರಡು ತಿಂಗಳುಗಳೊಳಗೆ, ಯಾರೇ ಸಾರ್ವಜನಿಕ ವ್ಯಕ್ತಿ, ಅಂಥ ಯೋಜನೆಗೆ ಸಂಬಂಧಪಟ್ಟಂತೆ ಯಾವುದೇ ಸಲಹೆಯನ್ನು ಯೋಜನಾ ಪ್ರಾಧಿಕಾರಕ್ಕೆ ಲಿಖಿತದಲ್ಲಿ ತಿಳಿಸಿದರೆ, ಆ ಯೋಜನಾ ಪ್ರಾಧಿಕಾರವು, ಅಂಥ ಸಲಹೆಯನ್ನು ಪರಿಶೀಲಿಸತಕ್ಕದ್ದು ಮತ್ತು ಯೋಜನೆಯನ್ನು ರಾಜ್ಯ ಸರ್ಕಾರಕ್ಕೆ ಕಳುಹಿಸುವುದಕ್ಕೆ ಮುಂಚೆ, ಯಾವುದೇ ಕಾಲದಲ್ಲಿ ಅದು ಸೂಕ್ತವೆಂದು ಭಾವಿಸುವಂಥ ಬದಲಾವಣೆಗಳನ್ನು ಆ ಯೋಜನೆಯಲ್ಲಿ ಮಾಡಬಹುದು.

[1][(3) ಬೃಹತ್ ಯೋಜನೆಯಲ್ಲಿ ಒಳಗೊಂಡ ಪ್ರದೇಶದ ಸರಹದ್ದುಗಳನ್ನು ತೋರಿಸುವ ನಕ್ಷೆಯ ಒಂದು ಪ್ರತಿಯನ್ನು, ಯೋಜನಾ ಪ್ರಾಧಿಕಾರ ಅಥವಾ ಸ್ಥಳೀಯ ಪ್ರಾಧಿಕಾರದ ಕಚೇರಿ ರಜೆಯಲ್ಲಿ ಎಲ್ಲ ಸೂಕ್ತ ಸಮಯದಲ್ಲಿ ಸಾರ್ವಜನಿಕರಿಗೆ ಮುಕ್ತವಾಗಿ ಇಡತಕ್ಕದ್ದು][1].

1. 2005ರ ಅಧಿನಿಯಮ 1ರ ಮೂಲಕ 14–2–2005ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**11. ಸ್ಥೂಲ ಅಭಿವೃದ್ಧಿ ಯೋಜನೆಯನ್ನು ತಯಾರಿಸುವುದಕ್ಕಾಗಿ ಸಮೀಕ್ಷೆಗಳನ್ನು ನಡೆಸುವುದಕ್ಕೆ ಪ್ರವೇಶಿಸುವ ಅಧಿಕಾರ:–** ಸ್ಥೂಲ ಅಭಿವೃದ್ಧಿ ಯೋಜನೆಯನ್ನು ತಯಾರಿಸಲು ಸಮೀಕ್ಷೆಯನ್ನು ನಡೆಸುವ ಉದ್ದೇಶಕ್ಕಾಗಿ ಮತ್ತು ಅಂಥ ಯೋಜನೆಯನ್ನು ತಯಾರಿಸುವ ಉದ್ದೇಶಕ್ಕಾಗಿ, ನಿರ್ದೇಶಕರು ಅಥವಾ ಯೋಜನಾ ಪ್ರಾಧಿಕಾರವು ಅಧಿಕೃತಗೊಳಿಸಿದ ಯಾರೇ ವ್ಯಕ್ತಿಯು, ಅಥವಾ ಈ ಅಧಿನಿಯಮದ ಮೇರೆಗೆ ಅಧಿಕೃತಗೊಂಡ ಅಥವಾ ನೇಮಕಗೊಂಡ ಯಾರೇ

ಸರ್ಕಾರಿ ನೌಕರನು ಅಥವಾ ವ್ಯಕ್ತಿಯು, ಒಡೆಯನಿಗೆ, ಅಧಿಭೋಗದಾರನಿಗೆ ಅಥವಾ ಆ ಭೂಮಿಯಲ್ಲಿ ಹಿತಾಸಕ್ತಿಯನ್ನು ಹೊಂದಿರುವ ಇತರ ವ್ಯಕ್ತಿಗೆ ನಿಯಮಿಸಬಹುದಾದಂಥ ನೋಟೀಸನ್ನು ನೀಡಿದ ತರುವಾಯ, ಅಂಥ ಭೂಮಿಗೆ ಪ್ರವೇಶಿಸಬಹುದು, ಅಂಥ ಭೂಮಿಯ ಸಮೀಕ್ಷೆ ಮಾಡಬಹುದು ಮತ್ತು ಅದರ ಸರಹದ್ದನ್ನು ಗುರುತು ಮಾಡಬಹುದು ಮತ್ತು ಅಂಥ ಉದ್ದೇಶಕ್ಕಾಗಿ ಅವಶ್ಯವಾದ ಎಲ್ಲಾ ಕಾರ್ಯಗಳನ್ನು ಕೈಗೊಳ್ಳಬಹುದು.

[1][**12. ಬೃಹತ್ ಯೋಜನೆಯ ಒಳಾಂಶಗಳು:–** (1) ಬೃಹತ್ ಯೋಜನೆಯು, ಯೋಜನಾ ಪ್ರಾಧಿಕಾರದ ಅಧಿಕಾರ ವ್ಯಾಪ್ತಿಯೊಳಗಿರುವ ಇಡೀ ಯೋಜನಾ ಪ್ರದೇಶದ ಅಭಿವೃದ್ಧಿಯನ್ನು ಮತ್ತು ಮೇಲ್ಪಾಟನ್ನು, ಕಾರ್ಯಗತಗೊಳಿಸಬೇಕಾದ ಮತ್ತು ವಿನಿಯಮಿಸಬೇಕಾದ ರೀತಿಯನ್ನು ಸೂಚಿಸುವ ನಕ್ಷೆಗಳ ಮತ್ತು ದಸ್ತಾವೇಜುಗಳ ಶ್ರೇಣಿಗಳನ್ನು ಒಳಗೊಂಡಿರತಕ್ಕದ್ದು, ಅಂಥ ಯೋಜನೆಯು ಈ ಮುಂದಿನ ಪ್ರಸ್ತಾವಗಳನ್ನು ಒಳಗೊಂಡಿರತಕ್ಕದ್ದು, ಎಂದರೆ,–

(ಎ) ವಲಯ ರಚನೆ ವಿನಿಯಮನಗಳೊಂದಿಗೆ ನಿವಾಸದ, ವಾಣಿಜ್ಯದ, ಕೈಗಾರಿಕೆಯ, ಕೃಷಿಯ, ಮನರಂಜನೆಯ, ಶಿಕ್ಷಣದ ಮತ್ತು ಇತರ ಸಾರ್ವಜನಿಕ ಉದ್ದೇಶಗಳಿಗಾಗಿ ಭೂಬಳಕೆಯ ವಲಯ ರಚನೆ;

(ಬಿ) ಮೇಲ್ಪಾಟುಗಳಿಗೆ ಸಂಬಂಧಿಸಿದ ಪ್ರಸ್ತಾವಗಳೊಂದಿಗೆ ತಕ್ಷಣದ ಮತ್ತು ಮುಂದಿನ ಅಗತ್ಯತೆಗಳನ್ನು ಪೂರೈಸುವುದಕ್ಕಾಗಿ ಮುಖ್ಯ ಮತ್ತು ಉಪ ರಸ್ತೆಗಳನ್ನು, ರಾಷ್ಟ್ರೀಯ ಹೆದ್ದಾರಿಗಳನ್ನು ಮತ್ತು ರಾಜ್ಯ ಹೆದ್ದಾರಿಗಳನ್ನು ಮತ್ತು ವಾಹನ ಸಂಚಾರ ಮಾರ್ಗದ ರೀತಿಯನ್ನು ಸೂಚಿಸುವ ಸಂಪೂರ್ಣ ರಸ್ತೆ ಮಾದರಿ;

(ಸಿ) ಉದ್ಯಾನವನಗಳಿಗೆ, ಆಟದ ಮೈದಾನಗಳಿಗೆ ಮತ್ತು ಇತರ ಮನರಂಜನೆಯ ಬಳಕೆಗೆ, ಸಾರ್ವಜನಿಕ ಬಯಲು ಸ್ಥಳಗಳಿಗೆ, ಸಾರ್ವಜನಿಕ ಕಟ್ಟಡಗಳಿಗೆ ಮತ್ತು ಸಂಸ್ಥೆಗಳಿಗೆ ಮೀಸಲಿಟ್ಟ ಪ್ರದೇಶಗಳು ಮತ್ತು ಹೊಸ ನಾಗರಿಕ ಅಭಿವೃದ್ಧಿಗಳಿಗಾಗಿ ವಿಹಿತವಾಗಬಹುದಾದಂಥ ಇತರ ಉದ್ದೇಶಗಳಿಗಾಗಿ ಮೀಸಲಿಟ್ಟ ಪ್ರದೇಶ;

(ಡಿ) ಮುಂದಿನ ಅಭಿವೃದ್ಧಿ ಮತ್ತು ವಿಸ್ತರಣೆಗಾಗಿ ಗುರುತಿಸಿದ ಪ್ರದೇಶಗಳು;

(ಇ) ಕೇಂದ್ರ ಸರ್ಕಾರದ, ರಾಜ್ಯ ಸರ್ಕಾರದ, ಯೋಜನಾ ಪ್ರಾಧಿಕಾರದ ಅಥವಾ ಸಾರ್ವಜನಿಕ ಉಪಯುಕ್ತತೆ ಉದ್ಯಮದ ಅಥವಾ ಕಾನೂನಿನ ಮೂಲಕ ಸ್ಥಾಪಿತವಾದ ಯಾವುದೇ ಇತರ ಪ್ರಾಧಿಕಾರದ ಉದ್ದೇಶಗಳಿಗಾಗಿ ಭೂಮಿಯನ್ನು ಮೀಸಲಿಡುವುದು ಮತ್ತು ಸಾರ್ವಜನಿಕ ಉದ್ದೇಶಗಳಿಗಾಗಿ ಅಥವಾ ಬೃಹತ್ ಯೋಜನೆಯಲ್ಲಿ ನಿರ್ದಿಷ್ಟಪಡಿಸಿದಂತೆ ಅಥವಾ ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ ಉಪಬಂಧಿಸಿದ ರೀತಿಯಲ್ಲಿ ಇಳಿದಾಣದ ಬಳಕೆಗಾಗಿ ಆರ್ಜಿಸುವುದಕ್ಕೆ ಒಳಪಡಬೇಕಾದ ಭೂಮಿಗಳನ್ನು ಗೊತ್ತುಪಡಿಸುವುದು;

(ಎಫ್) ಕೆಲವು ಪ್ರದೇಶಗಳನ್ನು ವಿಶೇಷ ನಿಯಂತ್ರಣ ಪ್ರದೇಶಗಳೆಂದು ಘೋಷಿಸುವುದು ಮತ್ತು ಕಟ್ಟಡದ ಎಲ್ಲೆ, ಕಟ್ಟಡದ ಎತ್ತರ, ನೆಲ ಪ್ರದೇಶ ಪ್ರಮಾಣ, ವಾಸ್ತುಶಿಲ್ಪದ ಲಕ್ಷಣಗಳು ಮತ್ತು ನಿಯಮಿಸಬಹುದಾದಂಥ ಇತರ ವಿವರಗಳಿಗೆ ಸಂಬಂಧಿಸಿದಂತೆ ರಚಿಸಬಹುದಾದಂಥ ವಿನಿಯಮನಗಳಿಗೊಳಪಟ್ಟ ಅಂಥ ಪ್ರದೇಶಗಳಲ್ಲಿ ಅಭಿವೃದ್ಧಿ;

(ಜಿ) ಯಾವ ಯಾವ ಹಂತಗಳಲ್ಲಿ ಯೋಜನೆಯನ್ನು ಕಾರ್ಯಗತಗೊಳಿಸಬೇಕೋ ಆ ಹಂತಗಳು.

**ವಿವರಣೆ:–**

(i) "ಕಟ್ಟಡದ ಎಲ್ಲೆ" ಎಂದರೆ ಬೀದಿಗೆ ಹೊಂದಿಕೊಂಡಿರುವ ಕಟ್ಟಡದ ಮೇಲುಪಾಯವನ್ನು ಯಾವ ಎಲ್ಲೆಯವರೆಗೆ ಕಾನೂನುಬದ್ಧವಾಗಿ ವಿಸ್ತರಿಸಬಹುದೋ ಆ ಎಲ್ಲೆ ಮತ್ತು ಅದು ಯಾವುದೇ ಕಾರ್ಯಯೋಜನೆಯಲ್ಲಿ ಗೊತ್ತುಪಡಿಸಿದ ಎಲ್ಲೆಗಳು ಯಾವುವಾದರೂ ಇದ್ದರೆ ಅವುಗಳನ್ನು ಒಳಗೊಳ್ಳುತ್ತದೆ;

(ii) "ನೆಲ ಪ್ರದೇಶ ಪ್ರಮಾಣ" ಎಂದರೆ, ವಿನಿಯಮನಗಳ ಮೇರೆಗೆ ನಿರ್ದಿಷ್ಟವಾಗಿ ವಿನಾಯಿತಿ ನೀಡಿದ ಪ್ರದೇಶಗಳನ್ನು ಹೊರತುಪಡಿಸಿ, ಪ್ಲಾಟಿನ ಒಟ್ಟು ಪ್ರದೇಶವನ್ನು, ಎಲ್ಲಾ ಅಂತಸ್ತುಗಳ ಸಂಯೋಜಿತ ಒಟ್ಟು ನೆಲ ಪ್ರದೇಶ ಪ್ರಮಾಣದಿಂದ ಭಾಗಿಸಿದರೆ ಬರುವ ಭಾಗಲಬ್ಧ.

(2) ಈ ಕೆಳಕಂಡ ವಿವರಗಳನ್ನು ಪ್ರಕಟಿಸತಕ್ಕದ್ದು ಮತ್ತು ಅವುಗಳನ್ನು ಬೃಹತ್ ಯೋಜನೆ ಸಹಿತ ನಿರ್ದೇಶಕರ ಮೂಲಕ ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು, ಎಂದರೆ:–

(i) ಅಂಥ ಯೋಜನೆಯನ್ನು ತಯಾರಿಸುವುದಕ್ಕೆ ಮುಂಚೆ ಆ ಯೋಜನಾ ಪ್ರಾಧಿಕಾರವು ನಡೆಸಿರುವ ಸಮೀಕ್ಷೆಗಳ ಬಗೆಗಿನ ವರದಿ;

(ii) ಬೃಹತ್ ಯೋಜನೆಯಲ್ಲಿ ಕಲ್ಪಿಸಿರುವ ಏರ್ಪಾಟುಗಳನ್ನು ವಿವರಿಸುವ ವರದಿ;

(iii) ಅಂಥ ಯೋಜನೆಯ ಏರ್ಪಾಟುಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ಪ್ರತಿಯೊಂದು ಭೂಬಳಕೆ ವಲಯಕ್ಕೆ ಸಂಬಂಧಿಸಿದ ಮತ್ತು ಯಾವುದೇ ಭೂಮಿಯನ್ನು ಅಭಿವೃದ್ಧಿಗೊಳಿಸುವುದಕ್ಕಾಗಿ ಯೋಜನಾ ಪ್ರಾಧಿಕಾರದಿಂದ ಯಾವ ರೀತಿಯಲ್ಲಿ ಅವಶ್ಯಕ ಅನುಮತಿಯನ್ನು ಪಡೆದುಕೊಳ್ಳಬಹುದೋ ಆ ರೀತಿಯನ್ನು ವಿವರಿಸಿರುವ ವಿನಿಯಮನಗಳು;

(iv) ಅಂಥ ಯೋಜನೆಯು ಆ ಯೋಜನಾ ಪ್ರಾಧಿಕಾರಕ್ಕೆ ವಿಧಿಸಿದ ಹೊಣೆಗಾರಿಕೆಗಳನ್ನು ಯಾವ ಯಾವ ಹಂತಗಳಲ್ಲಿ ಈಡೇರಿಸಬೇಕೆಂದು ಉದ್ದೇಶಿಸಲಾಗಿದೆಯೋ ಆ ಹಂತಗಳ ಬಗೆಗಿನ ವರದಿ.

(3) ಬೃಹತ್ ಯೋಜನೆಯು, "ಪರಂಪರೆ ಕಟ್ಟಡಗಳನ್ನು" ಮತ್ತು "ಪರಂಪರೆ ಎಲ್ಲೆ ಕಟ್ಟಡಗಳನ್ನು" ಸೂಚಿಸತಕ್ಕದ್ದು ಮತ್ತು ಅವುಗಳನ್ನು ಸಂರಕ್ಷಿಸುವುದಕ್ಕಾಗಿ ಅದರಲ್ಲಿ ಮಾಡಿದ ವಿನಿಯಮನಗಳನ್ನು ಒಳಗೊಳ್ಳತಕ್ಕದ್ದು.][1]

1. 2005ರ ಅಧಿನಿಯಮ ಸಂ.1ರ ಮೂಲಕ 14–2–2005ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][**13. ಬೃಹತ್ ಯೋಜನೆಯ ಅನುಮೋದನೆ:–** (1) 9ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಯೋಜನಾ ಪ್ರಾಧಿಕಾರದಿಂದ 12ನೇ ಪ್ರಕರಣದಲ್ಲಿ ಉಲ್ಲೇಖಿಸಿದ ವಿವರಗಳೊಂದಿಗೆ ಬೃಹತ್ ಯೋಜನೆಯನ್ನು ಸ್ವೀಕರಿಸಿದ ಮೇಲೆ ಅಥವಾ 9ನೇ ಪ್ರಕರಣದ (2)ನೇ ಉಪಪ್ರಕರಣದ ಮೇರೆಗೆ ಅಂಥ ಯೋಜನೆಯನ್ನು ಮತ್ತು ವಿವರಗಳನ್ನು ತಯಾರಿಸಿದ ಮತ್ತು ಪ್ರಕಟಿಸಿದ ತರುವಾಯ, ರಾಜ್ಯ ಸರ್ಕಾರವು, ಅದು ಸೂಕ್ತವೆಂದು ಭಾವಿಸುವಂಥ ಅಥವಾ ನಿರ್ದೇಶಕರು ಸಲಹೆ ಮಾಡಬಹುದಾದಂಥ ಬದಲಾವಣೆಗಳನ್ನು ಮಾಡಿದ ತರುವಾಯ, ಯೋಜನೆಯನ್ನು ಮತ್ತು ವಿವರಗಳನ್ನು ನಿರ್ದೇಶಕರ ಮುಖಾಂತರ

ಯೋಜನಾ ಪ್ರಾಧಿಕಾರಕ್ಕೆ ಹಿಂದಿರುಗಿಸತಕ್ಕದ್ದು; ಅದು ಆ ತರುವಾಯ ಯೋಜನೆಯನ್ನು ಮತ್ತು ವಿವರಗಳನ್ನು, ಅಧಿಸೂಚನೆ ಮೂಲಕ ಪ್ರಕಟಿಸಿದ ಅರವತ್ತು ದಿನಗಳ ಒಳಗೆ ಸಾರ್ವಜನಿಕರಿಂದ ಅಭಿಪ್ರಾಯಗಳನ್ನು ಆಹ್ವಾನಿಸಿ ಪ್ರಕಟಿಸತಕ್ಕದ್ದು.

(2) (1)ನೇ ಉಪಪ್ರಕರಣದ ಮೇರೆಗೆ ಪ್ರಕಟಣೆ ಮಾಡಿದ ಅರವತ್ತು ದಿನಗಳೊಳಗೆ ಯಾರೇ ಸಾರ್ವಜನಿಕ ವ್ಯಕ್ತಿಯು ಯೋಜನೆಯ ಮತ್ತು ವರದಿಗಳ ಬಗ್ಗೆ ಯಾವುವೇ ಅಭಿಪ್ರಾಯಗಳನ್ನು ಯೋಜನಾ ಪ್ರಾಧಿಕಾರಕ್ಕೆ ಲಿಖಿತದಲ್ಲಿ ತಿಳಿಸಿದ್ದರೆ, ಆ ಯೋಜನಾ ಪ್ರಾಧಿಕಾರವು ಅಂಥ ಅಭಿಪ್ರಾಯಗಳನ್ನು ಪರಿಶೀಲಿಸತಕ್ಕದ್ದು ಮತ್ತು ಆ ಯೋಜನೆಯ ಮತ್ತು ವರದಿಗಳ ಬಗ್ಗೆ ಸಾರ್ವಜನಿಕರು ನೀಡಿದ ಅಭಿಪ್ರಾಯಗಳನ್ನು ಗಮನಿಸಿ ಯೋಜನೆಯಲ್ಲಿ ಮತ್ತು ವರದಿಗಳಲ್ಲಿ ಮಾರ್ಪಾಟು ಮಾಡುವುದು ಅವಶ್ಯವೆಂದು ಅದು ಪರಿಗಣಿಸುವಂಥ ಮಾರ್ಪಾಟುಗಳಿಗಾಗಿ ಶಿಫಾರಸು ಸಹಿತ ನಿರ್ದೇಶಕರ ಮುಖಾಂತರ ರಾಜ್ಯ ಸರ್ಕಾರಕ್ಕೆ ಪುನಃ ಒಪ್ಪಿಸತಕ್ಕದ್ದು.

(3) ರಾಜ್ಯ ಸರ್ಕಾರವು, ಯೋಜನಾ ಪ್ರಾಧಿಕಾರದಿಂದ ಆ ಯೋಜನೆಯನ್ನು ಮತ್ತು ವರದಿಗಳನ್ನು ಮತ್ತು ಬದಲಾವಣೆ ಬಗೆಗಿನ ಶಿಫಾರಸ್ಸುಗಳನ್ನು ಸ್ವೀಕರಿಸಿದ ತರುವಾಯ, ನಿರ್ದೇಶಕರೊಂದಿಗೆ ಸಮಾಲೋಚಿಸಿ, ಅಂಥ ಅಭಿಪ್ರಾಯಗಳನ್ನು ಮತ್ತು ಯೋಜನಾ ಪ್ರಾಧಿಕಾರದ ಶಿಫಾರಸುಗಳನ್ನು ಗಮನಿಸಿ ನಿರ್ದೇಶಕರು ಸಲಹೆ ಮಾಡಬಹುದಾದಂಥ ಬದಲಾವಣೆಗಳೊಂದಿಗೆ ಅಥವಾ ಅನ್ಯಥಾ ಯೋಜನೆಗೆ ಮತ್ತು ವರದಿಗಳಿಗೆ ತನ್ನ ಅಂತಿಮ ಅನುಮೋದನೆಯನ್ನು ನೀಡತಕ್ಕದ್ದು.

(4) ರಾಜ್ಯ ಸರ್ಕಾರವು ಅಂತಿಮವಾಗಿ ಅನುಮೋದಿಸಿದ ಬೃಹತ್ ಯೋಜನೆಯನ್ನು ಮತ್ತು ವರದಿಗಳನ್ನು ನಿಯಮಿಸಿದ ರೀತಿಯಲ್ಲಿ ಯೋಜನಾ ಪ್ರಾಧಿಕಾರವು ಪ್ರಕಟಿಸತಕ್ಕದ್ದು. ಯೋಜನೆಯನ್ನು ಮತ್ತು ವರದಿಗಳನ್ನು ನಿರ್ದೇಶಕರ ಮತ್ತು ಯೋಜನಾ ಪ್ರಾಧಿಕಾರದ ಕಚೇರಿಗಳಲ್ಲಿ ಖಾಯಂ ಆಗಿ ಪ್ರದರ್ಶಿಸತಕ್ಕದ್ದು ಮತ್ತು ಅದರ ಒಂದು ಪ್ರತಿಯನ್ನು ಸಾರ್ವಜನಿಕರ ಪರಿಶೀಲನೆಗಾಗಿ ಲಭ್ಯವಾಗುವಂತೆ ಯೋಜನಾ ಪ್ರಾಧಿಕಾರದ ಕಚೇರಿಯಲ್ಲಿ ಇಡತಕ್ಕದ್ದು.][1]

1. 2005ರ ಅಧಿನಿಯಮ ಸಂಖ್ಯೆ 1ರ ಮೂಲಕ 14-2-2005ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][**13ಎ. ಮಧ್ಯಕಾಲೀನ ಬೃಹತ್ ಯೋಜನೆ:-** (1) ಬೃಹತ್ ಯೋಜನೆಯನ್ನು ತಯಾರಿಸುವವರೆಗೆ ಯೋಜನಾ ಪ್ರಾಧಿಕಾರದ ಅಧಿಕಾರ ವ್ಯಾಪ್ತಿಯೊಳಗಿರುವ ಇಡೀ ಪ್ರದೇಶಕ್ಕಾಗಿ ಅಥವಾ ಅದರ ಯಾವುದೇ ಭಾಗಕ್ಕಾಗಿ ಮಧ್ಯಕಾಲೀನ ಬೃಹತ್ ಯೋಜನೆಯನ್ನು ತಯಾರಿಸುವುದು ಮತ್ತು ಪ್ರಕಟಿಸುವುದು ವಿಹಿತವೆಂದು ಯೋಜನಾ ಪ್ರಾಧಿಕಾರವು ಪರಿಗಣಿಸಿದರೆ ಮತ್ತು ರಾಜ್ಯ ಸರ್ಕಾರವು ಹಾಗೆ ಮಾಡಲು ನಿರ್ದೇಶಿಸಿದಾಗ, ಅದನ್ನು ತಯಾರಿಸತಕ್ಕದ್ದು ಮತ್ತು ಪ್ರಕಟಿಸತಕ್ಕದ್ದು ಮತ್ತು ಆ ತರುವಾಯ 13ನೇ ಪ್ರಕರಣದ ಉಪಬಂಧಗಳು ಸಾಧ್ಯವಾದಷ್ಟುಮಟ್ಟಿಗೆ ಆದರೆ ಈ ಉಪಬಂಧಗಳಿಗೆ ಒಳಪಟ್ಟು, ಬೃಹತ್ ಯೋಜನೆಯನ್ನು ತಯಾರಿಸುವುದಕ್ಕೆ ಮತ್ತು ಪ್ರಕಟಿಸುವುದಕ್ಕೆ ಸಂಬಂಧಿಸಿದಂತೆ ಅವು ಹೇಗೆ ಅನ್ವಯವಾಗುತ್ತವೆಯೋ ಅಂಥ ಮಧ್ಯಕಾಲೀನ ಬೃಹತ್ ಯೋಜನೆಗೆ ಸಂಬಂಧಿಸಿದಂತೆಯೂ ಅನ್ವಯವಾಗತಕ್ಕದ್ದು.

1. 2005ರ ಅಧಿನಿಯಮ ಸಂಖ್ಯೆ 1ರ ಮೂಲಕ 14-2-2005ರಿಂದ ಜಾರಿಗೆ ಬರುವಂತೆ 13ಎ ಯಿಂದ 13ಇ ವರೆಗಿನ ಪ್ರಕರಣಗಳನ್ನು ಸೇರಿಸಲಾಗಿದೆ.

(2) ಯೋಜನಾ ಪ್ರಾಧಿಕಾರವು, ಬೃಹತ್ ಯೋಜನೆಯನ್ನು ತಯಾರಿಸಲು ಉದ್ದೇಶಿಸಿದ ತನ್ನ ಘೋಷಣೆಯನ್ನು ರಾಜ್ಯಪತ್ರದಲ್ಲಿ ಸೂಚಿಸಿದ ದಿನಾಂಕದಿಂದ ಒಂದು ವರ್ಷ ಮೀರದಂತೆ ಅಥವಾ ರಾಜ್ಯಸರ್ಕಾರವು ವಿಸ್ತರಿಸಬಹುದಾದಂಥ ಒಂದು ವರ್ಷವನ್ನು ಮೀರದ ಮತ್ತೊಂದು ಅವಧಿಯನ್ನು ಮೀರದಂತೆ, ಅಂಥ ಯೋಜನೆಯನ್ನು ತಯಾರಿಸತಕ್ಕದ್ದು ಮತ್ತು ಪ್ರಕಟಿಸತಕ್ಕದ್ದು.

(3) ಮಧ್ಯಕಾಲೀನ ಬೃಹತ್ ಯೋಜನೆಯು, 12ನೇ ಪ್ರಕರಣದ (ಎ), ಬಿ) ಮತ್ತು (ಸಿ) ಖಂಡಗಳಲ್ಲಿ ನಮೂದಿಸಿದ ವಿಷಯಗಳಿಗಾಗಿ ಮಾತ್ರವೇ ಅವಕಾಶ ಕಲ್ಪಿಸತಕ್ಕದ್ದು ಮತ್ತು ಅಗತ್ಯವಾದರೆ, ಆ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ, ಯೋಜನಾ ಪ್ರಾಧಿಕಾರವು ಸೇರಿಸಲು ನಿರ್ಧರಿಸುವ ಅಥವಾ ರಾಜ್ಯಸರ್ಕಾರವು ನಿರ್ದೇಶಿಸಬಹುದಾದ ಇತರ ವಿಷಯಗಳಿಗಾಗಿ ಅವಕಾಶ ಕಲ್ಪಿಸತಕ್ಕದ್ದು.

(4) ಮಧ್ಯಕಾಲೀನ ಬೃಹತ್ ಯೋಜನೆಯು, ಯೋಜನಾ ಪ್ರಾಧಿಕಾರವು ಅಂಥ ಯೋಜನೆಯಲ್ಲಿ ಮಾಡಿದ ಪ್ರಸ್ತಾವಗಳನ್ನು ವಿವರಿಸಲು ಮತ್ತು ನಿದರ್ಶನ ಸಹಿತ ಸ್ಪಷ್ಟಪಡಿಸಲು ಅವಶ್ಯವೆಂದು ಪರಿಗಣಿಸಬಹುದಾದಂಥ ನಕ್ಷೆಗಳನ್ನು ಮತ್ತು ಅಂಥ ವಿವರಣಾತ್ಮಕ ವಿಷಯಗಳನ್ನು ಒಳಗೊಂಡಿರತಕ್ಕದ್ದು.

**13ಬಿ. ಹೆಚ್ಚುವರಿ ಪ್ರದೇಶಕ್ಕಾಗಿ ಬೃಹತ್ ಯೋಜನೆಯನ್ನು ಸಿದ್ಧಪಡಿಸುವುದು:-** ಯೋಜನಾ ಪ್ರಾಧಿಕಾರವು, ಬೃಹತ್ ಯೋಜನೆಯನ್ನು ಸಿದ್ಧಪಡಿಸುವ ತನ್ನ ಉದ್ದೇಶವನ್ನು ಘೋಷಿಸಿದ ತರುವಾಯ ಅಥವಾ ಯೋಜನಾ ಪ್ರಾಧಿಕಾರವು ಸಿದ್ಧಪಡಿಸಿದ ಬೃಹತ್ ಯೋಜನೆಗೆ ಮಂಜೂರಾತಿ ದೊರೆತ ತರುವಾಯ, ಹೆಚ್ಚುವರಿ ಪ್ರದೇಶವನ್ನು ಸೇರಿಸಿ ಯೋಜನಾ ಪ್ರಾಧಿಕಾರದ ಅಧಿಕಾರ ವ್ಯಾಪ್ತಿಯನ್ನು ಯಾವುದೇ ಕಾಲದಲ್ಲಿ ಹೆಚ್ಚಿಸಿದಾಗ, ಯೋಜನಾ ಪ್ರಾಧಿಕಾರವು ಬೃಹತ್ ಯೋಜನೆಯನ್ನು ಸಿದ್ಧಪಡಿಸುವುದಕ್ಕಾಗಿ ಈ ಅಧಿನಿಯಮದ ಉಪಬಂಧಗಳನ್ನು ಅನುಸರಿಸಿದ ತರುವಾಯ ಮೂಲತಃ ತನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಪ್ರದೇಶಕ್ಕಾಗಿ ಸಿದ್ಧಪಡಿಸಿದ ಅಥವಾ ಸಿದ್ಧಪಡಿಸಬೇಕಾದ ತಾತ್ಕಾಲಿಕ ಅಥವಾ ಅಂತಿಮ ಬೃಹತ್ ಯೋಜನೆಯ ಸಹಿತ ಅಂಥ ಹೆಚ್ಚುವರಿ ಪ್ರದೇಶಕ್ಕಾಗಿ ಪ್ರತ್ಯೇಕವಾಗಿ ಅಥವಾ ಜಂಟಿಯಾಗಿ ಬೃಹತ್ ಯೋಜನೆಯನ್ನು ಸಿದ್ಧಪಡಿಸಬೇಕು ಮತ್ತು ಪ್ರಕಟಿಸಬೇಕು ಮತ್ತು ಬೃಹತ್ ಯೋಜನೆಯನ್ನು ಅನುಮೋದನೆಗಾಗಿ ರಾಜ್ಯಸರ್ಕಾರಕ್ಕೆ ಸಲ್ಲಿಸುವುದಕ್ಕಾಗಿ ಅದು ಅನುಸರಿಸಿದಂಥದೇ ಕಾರ್ಯವಿಧಾನವನ್ನು ಅನುಸರಿಸಿದ ತರುವಾಯ ಮಂಜೂರಾತಿಗಾಗಿ ಅದನ್ನು ರಾಜ್ಯ ಸರ್ಕಾರಕ್ಕೆ ಸಲ್ಲಿಸಬೇಕು:

ಪರಂತು, ಹೆಚ್ಚುವರಿ ಪ್ರದೇಶದ ಬೃಹತ್ ಯೋಜನೆಯು ಅಂತಿಮ ಬೃಹತ್ ಯೋಜನೆಯಲ್ಲಿ ಮಾರ್ಪಾಟು ಮಾಡಬೇಕೆಂದು ಅಗತ್ಯಪಡಿಸಿರುವಾಗ ಅಥವಾ ಅಂಥ ಮಾರ್ಪಾಡುಗಳನ್ನು ಮಾಡಲು ರಾಜ್ಯಸರ್ಕಾರವು ನಿರ್ದೇಶಿಸಿದ್ದರೆ, ಯೋಜನಾ ಪ್ರಾಧಿಕಾರವು, 9ನೇ ಪ್ರಕರಣದಲ್ಲಿ ಗೊತ್ತುಪಡಿಸಿರುವ ಕಾರ್ಯವಿಧಾನವನ್ನು ಅನುಸರಿಸಿದ ತರುವಾಯ ಸುಸಂಗತವಾಗುವಷ್ಟರ ಮಟ್ಟಿಗೆ ಅಂತಿಮ ಬೃಹತ್ ಯೋಜನೆಯನ್ನು ಪರಿಷ್ಕರಿಸತಕ್ಕದ್ದು.

**13ಸಿ. ಅಸ್ತಿತ್ವದಲ್ಲಿರುವ ಸ್ಥೂಲ ಅಭಿವೃದ್ಧಿ ಯೋಜನೆಯನ್ನು ಅಥವಾ ಸಮಗ್ರ ಅಭಿವೃದ್ಧಿ ಯೋಜನೆಯನ್ನು ಬೃಹತ್ ಯೋಜನೆಯೆಂದು ಭಾವಿಸುವುದು:-** (1) ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ (ತಿದ್ದುಪಡಿ) ಅಧಿನಿಯಮ, 2004ರ (ಇನ್ನು ಮುಂದೆ ಈ ಪ್ರಕರಣದಲ್ಲಿ ತಿದ್ದುಪಡಿ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) ಪ್ರಾರಂಭಕ್ಕೆ ನಿಕಟಪೂರ್ವದಲ್ಲಿ, 10ನೇ ಪ್ರಕರಣದ (1)ನೇ ಉಪ-ಪ್ರಕರಣದ ಮೇರೆಗೆ ರಾಜ್ಯ ಸರ್ಕಾರವು ಪ್ರಕಟಿಸಿದ ಸ್ಥೂಲ ಅಭಿವೃದ್ಧಿ ಯೋಜನೆ ಸಿದ್ಧಪಡಿಸುವ ಉದ್ದೇಶದ ಘೋಷಣೆಯನ್ನು, ಈ ಅಧಿನಿಯಮದ ಮೇರೆಗೆ ಬೃಹತ್ ಯೋಜನೆಯನ್ನು ಸಿದ್ಧಪಡಿಸುವ ಉದ್ದೇಶದ ಘೋಷಣೆಯೆಂದು ಭಾವಿಸತಕ್ಕದ್ದು.

(2) ಯಾವುದೇ ಯೋಜನಾ ಪ್ರಾಧಿಕಾರವು ಸಿದ್ಧಪಡಿಸಿದ ಮತ್ತು 13ನೇ ಪ್ರಕರಣದ ಮೇರೆಗೆ ಅಥವಾ ಸಂದರ್ಭಾನುಸಾರ, ತಿದ್ದುಪಡಿ ಅಧಿನಿಯಮವು ಪ್ರಾರಂಭವಾಗುವುದಕ್ಕೆ ಮುಂಚೆ 22ನೇ ಪ್ರಕರಣದ ಮೇರೆಗೆ ರಾಜ್ಯ ಸರ್ಕಾರವು ತಾತ್ಕಾಲಿಕವಾಗಿ ಅಥವಾ ಅಂತಿಮವಾಗಿ ಅನುಮೋದಿಸಿದ ಸ್ಥೂಲ ಅಭಿವೃದ್ಧಿ ಯೋಜನೆಯನ್ನು ಅಥವಾ ವ್ಯಾಪಕ ಅಭಿವೃದ್ಧಿ ಯೋಜನೆಯನ್ನು ತಾತ್ಕಾಲಿಕವಾಗಿ ಅಥವಾ ಸಂದರ್ಭಾನುಸಾರ ಈ ಅಧಿನಿಯಮದ ಮೇರೆಗೆ ಅನುಮೋದಿಸಿದ ಅಂತಿಮ ಬೃಹತ್ ಯೋಜನೆ ಎಂದು ಭಾವಿಸತಕ್ಕದ್ದು.

(3) ಯಾವುದೇ ಯೋಜನಾ ಪ್ರಾಧಿಕಾರವು ಸಿದ್ಧಪಡಿಸಿದ, ತಿದ್ದುಪಡಿ ಅಧಿನಿಯಮವು ಪ್ರಾರಂಭವಾಗುವುದಕ್ಕೆ ಮುಂಚೆ 25ನೇ ಪ್ರಕರಣದ ಮೇರೆಗೆ ಪರಿಷ್ಕರಿಸಿದ ಸಮಗ್ರ ಅಭಿವೃದ್ಧಿ ಯೋಜನೆಯನ್ನು ಈ ಅಧಿನಿಯಮದ ಮೇರೆಗೆ ಪರಿಷ್ಕರಿಸಿದ ಬೃಹತ್ ಯೋಜನೆ ಎಂದು ಭಾವಿಸತಕ್ಕದ್ದು.

**13ಡಿ. ಬೃಹತ್ ಯೋಜನೆಯ ಪರಿಷ್ಕರಣೆ:–** 13ಸಿ ಪ್ರಕರಣದ ಉಪಬಂಧಗಳಿಗೊಳಪಟ್ಟು, ಬೃಹತ್ ಯೋಜನೆಯು ಯಾವ ದಿನಾಂಕದಂದು ಜಾರಿಗೆ ಬಂದಿರುವುದೋ ಆ ದಿನಾಂಕದಿಂದ ಕೊನೆ ಪಕ್ಷ ಪ್ರತಿ ಹತ್ತು ವರ್ಷಗಳಿಗೊಮ್ಮೆ ಯೋಜನಾ ಪ್ರಾಧಿಕಾರವು, ತನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಪ್ರದೇಶವನ್ನು ಹೊಸದಾಗಿ ಸಮೀಕ್ಷೆ ನಡೆಸತಕ್ಕದ್ದೆಂದು, ರಾಜ್ಯಸರ್ಕಾರವು ನಿರ್ದೇಶಿಸಿದರೆ, ಅಸ್ತಿತ್ವದಲ್ಲಿರುವ ಬೃಹತ್ ಯೋಜನೆಯನ್ನು ಪರಿಷ್ಕರಿಸುವ ದೃಷ್ಟಿಯಿಂದ ಅದು ಹಾಗೆ ಮಾಡಬಹುದು ಮತ್ತು 9ನೇ ಪ್ರಕರಣದಿಂದ 12ನೇ ಪ್ರಕರಣದವರೆಗಿನ ಉಪಬಂಧಗಳು (ಎರಡೂ ಸೇರಿ), ಬೃಹತ್ ಯೋಜನೆಯ ಅಂಥ ಪರಿಷ್ಕರಣೆಯ ಸಂಬಂಧದಲ್ಲಿ ಯಥೋಚಿತ ವ್ಯತ್ಯಾಸಗಳೊಂದಿಗೆ ಅನ್ವಯವಾಗತಕ್ಕದ್ದು.

**13ಇ. ವಿನಿಯಮನಗಳಿಗೆ ತಿದ್ದುಪಡಿ:–** ರಾಜ್ಯಸರ್ಕಾರವು, ಒಂದು ತಿಂಗಳಿಗೆ ಕಡಿಮೆ ಇಲ್ಲದಂತೆ ಕರಡಿನ ಪೂರ್ವ ಪ್ರಕಟಣೆಯ ತರುವಾಯ ಅಧಿಸೂಚನೆಯ ಮೂಲಕ ವಿನಿಯಮನಗಳಿಗೆ ತಿದ್ದುಪಡಿಗಳನ್ನು ಮಾಡಬಹುದು][1].

1. 2005ರ ಅಧಿನಿಯಮ ಸಂಖ್ಯೆ 1ರ ಮೂಲಕ 14–2–2005ರಿಂದ ಜಾರಿಗೆ ಬರುವಂತೆ 13ಎ ಯಿಂದ 13ಇ ವರೆಗಿನ ಪ್ರಕರಣಗಳನ್ನು ಸೇರಿಸಲಾಗಿದೆ.

[1][**14. ಬೃಹತ್ ಯೋಜನೆ ಮತ್ತು ವಿನಿಯಮನಗಳ ಜಾರಿ**][1]**:–** [1][(1) 10ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಯಾವ ದಿನಾಂಕದಂದು ಮತ್ತು ಯಾವ ದಿನಾಂಕದಿಂದ ಬೃಹತ್ ಯೋಜನೆಯನ್ನು ಸಿದ್ಧಪಡಿಸುವ ಉದ್ದೇಶದ ಬಗ್ಗೆ ಘೋಷಣೆಯನ್ನು ಪ್ರಕಟಿಸಲಾಯಿತೋ ಆ ದಿನಾಂಕದಂದು ಮತ್ತು ಆ ದಿನಾಂಕದಿಂದ ಪ್ರತಿಯೊಂದು ಭೂಬಳಕೆಯು, ಭೂಬಳಕೆಯಲ್ಲಿನ ಆದ ಪ್ರತಿಯೊಂದು ಬದಲಾವಣೆಯು ಮತ್ತು 14ಎ ಪ್ರಕರಣಕ್ಕೆ ಒಳಪಟ್ಟು ಯೋಜನೆಯಲ್ಲಿ ಒಳಗೊಂಡಿರುವ ಪ್ರದೇಶದಲ್ಲಿನ ಪ್ರತಿಯೊಂದು ಅಭಿವೃದ್ಧಿಯು, ಈ ಅಧಿನಿಯಮದ ಉಪಬಂಧಗಳಿಗೆ, 13ನೇ ಪ್ರಕರಣದ (3)ನೇ ಉಪಪ್ರಕರಣದ ಮೇರೆಗೆ ರಾಜ್ಯ ಸರ್ಕಾರವು ಅಂತಿಮವಾಗಿ ಅನುಮೋದಿಸಿದ ಬೃಹತ್ ಯೋಜನೆಗೆ ಮತ್ತು ವರದಿಗೆ ಅನುಗುಣವಾಗಿರತಕ್ಕದ್ದು][1].

1. 2005ರ ಅಧಿನಿಯಮ ಸಂ.1ರ ಮೂಲಕ 14–2–2005 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) [1][xxx][1] (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಲಾಗಿರುವಂತೆ ಭೂಬಳಕೆಯಲ್ಲಿನ ಅಥವಾ ಅಭಿವೃದ್ಧಿಯಲ್ಲಿನ ಯಾವುದೇ ಅಂಥ ಬದಲಾವಣೆಯನ್ನು, ಯೋಜನಾ ಪ್ರಾಧಿಕಾರದ ಲಿಖಿತ ಅನುಮತಿಯ ಹೊರತು ಮಾಡತಕ್ಕದ್ದಲ್ಲ, ಆ ಅನುಮತಿಯು ನಿಯಮಿಸಿದ ನಮೂನೆಯಲ್ಲಿ ಯೋಜನಾ ಪ್ರಾಧಿಕಾರವು ಕೊಟ್ಟ ಪ್ರಾರಂಭ ಪ್ರಮಾಣಪತ್ರದಲ್ಲಿ ಒಳಗೊಂಡಿರತಕ್ಕದ್ದು:

1. 1964ರ ಅಧಿನಿಯಮ ಸಂ.14ರ ಮೂಲಕ 26.3.1964 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][ಪರಂತು, ಈ ಪ್ರಕರಣದ ಮೇರೆಗೆ ಭೂ ಬಳಕೆಗಾಗಿ ಅಥವಾ ಭೂ ಬಳಕೆಯಲ್ಲಿ ಬದಲಾವಣೆಗಾಗಿ ಕೃಷಿಯೇತರ ಉದ್ದೇಶಕ್ಕೆ ಕೃಷಿ ಭೂಮಿಯ ಪರಿವರ್ತನೆಯು ಅಗತ್ಯವಿದ್ದರೆ ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಉಪಬಂಧಗಳಿಗನುಸಾರವಾಗಿ ಅನುಮತಿಯನ್ನು ಪಡೆದುಕೊಂಡಿದ್ದ ಹೊರತು, ಅಂಥ ಬಳಕೆಗೆ ಅಥವಾ ಭೂ ಬಳಕೆಯಲ್ಲಿನ ಬದಲಾವಣೆಗೆ ಅನುಮತಿಸತಕ್ಕದ್ದಲ್ಲ.]

1. 1991ರ ಅಧಿನಿಯಮ ಸಂ.2ರ ಮೂಲಕ 20–3–1991 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**ವಿವರಣೆ:–** ಈ ಪ್ರಕರಣದ ಉದ್ದೇಶಕ್ಕಾಗಿ,–

(ಎ) "ಅಭಿವೃದ್ಧಿ" ಪದಾವಳಿಗೆ ಯಾವುದೇ ಭೂಮಿಯಲ್ಲಿ ಅಥವಾ ಅದರ ಮೇಲ್ಗಡೆ ಅಥವಾ ಅದರ ಒಳಗೆ ಕಟ್ಟಡ ನಿರ್ಮಾಣ ಅಥವಾ ಇತರ ಕಾರ್ಯಾಚರಣೆಯನ್ನು ನಡೆಸುವುದು ಅಥವಾ ಯಾವುದೇ ಕಟ್ಟಡದ ಅಥವಾ ಇತರ ಭೂಮಿಯ ಬಳಕೆಯಲ್ಲಿ ಯಾವುದೇ ಮುಖ್ಯ ಬದಲಾವಣೆಯನ್ನು ಮಾಡುವುದು ಎಂದು ಅರ್ಥ;

(ಬಿ) ಈ ಕೆಳಕಂಡ ಕಾರ್ಯಾಚರಣೆಗಳು ಅಥವಾ ಭೂಬಳಕೆಗಳು, ಯಾವುದೇ ಕಟ್ಟಡದ ಅಥವಾ ಭೂಮಿಯ ಅಭಿವೃದ್ಧಿಯನ್ನು ಒಳಗೊಳ್ಳುವುದೆಂದು ಭಾವಿಸತಕ್ಕದ್ದಲ್ಲ, ಎಂದರೆ,–

(i) ಯಾವ ಕಾಮಗಾರಿಗಳು ಕಟ್ಟಡದ ಒಳಭಾಗಕ್ಕೆ ಮಾತ್ರವೇ ಸಂಬಂಧ ಪಡುವವೋ ಅಥವಾ ಆ ಕಟ್ಟಡದ ಹೊರನೋಟಕ್ಕೆ ಪ್ರಮುಖವಾಗಿ ಸಂಬಂಧಪಡುವುದಿಲ್ಲವೋ ಆ ಕಾಮಗಾರಿಗಳಾದ, ಯಾವುದೇ ಕಟ್ಟಡವನ್ನು ಸುಸ್ಥಿತಿಯಲ್ಲಿ ಇಡುವ, ಮೇಲ್ಪಾಟು ಮಾಡುವ ಅಥವಾ ಇತರ ಬದಲಾವಣೆಯ ಕಾಮಗಾರಿಗಳನ್ನು ಕೈಗೊಳ್ಳುವುದು;

[1][(ii) XXX

(iii) XXX][1]

1. 2004ರ ಅಧಿನಿಯಮ ಸಂಖ್ಯೆ 23ರ ಮೂಲಕ (ii) ಮತ್ತು (iii) ನ್ನು 3–6–2004ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(iv) ವಾಸದ ಮನೆಯನ್ನು ಹಾಗೆಂದು ಉಪಭೋಗಿಸುವುದಕ್ಕೆ ಪ್ರಾಸಂಗಿಕವಾದ ಯಾವುದೇ ಉದ್ದೇಶಕ್ಕಾಗಿ ವಾಸದ ಮನೆಯ ಆವರಣದೊಳಗಿನ, ಬಯಲಿನೊಳಗಿರುವ ಯಾವುದೇ ಕಟ್ಟಡ ಅಥವಾ ಇತರ ಭೂಮಿಯ ಬಳಕೆ;

(v) 10ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಸ್ಥೂಲ ಅಭಿವೃದ್ಧಿ ಯೋಜನೆಯನ್ನು ಸಿದ್ಧಪಡಿಸುವ ಉದ್ದೇಶದ ಘೋಷಣೆಯನ್ನು ಪ್ರಕಟಿಸಿದ ದಿನದಂದು ಯಾವುದೇ ಇತರ ಉದ್ದೇಶಕ್ಕಾಗಿ ತಾತ್ಕಾಲಿಕವಾಗಿ ಬಳಸುತ್ತಿದ್ದ ಭೂಮಿಯ ಸಾಮಾನ್ಯ ಬಳಕೆಯನ್ನು ಪುನಃ ಆರಂಭಿಸುವುದು;

(vi) ಭೂಮಿಯನ್ನು ಒಂದು ಉದ್ದೇಶಕ್ಕಾಗಿ ಮತ್ತು ಬೇರೆ ಸಂದರ್ಭಗಳಲ್ಲಿ ಯಾವುದೇ ಇತರ ಉದ್ದೇಶಕ್ಕಾಗಿ ಸಹ ಸಾಮಾನ್ಯವಾಗಿ ಬಳಸಿದಾಗ, ಅಂಥವೇ ಸಂದರ್ಭಗಳಲ್ಲಿ ಆ ಇತರ ಉದ್ದೇಶಕ್ಕಾಗಿ ಸಹ ಸಾಮಾನ್ಯವಾಗಿ ಬಳಸಿದಾಗ ಆ ಭೂಮಿಯ ಬಳಕೆ.

(3) ಉಪಪ್ರಕರಣ (2)ರ ಮೇರೆಗೆ ಅನುಮತಿಗಾಗಿ ಸಲ್ಲಿಸಿದ ಪ್ರತಿಯೊಂದು ಅರ್ಜಿಯೊಂದಿಗೆ ಭೂಮಿಯ ಯಾವ ಪ್ಲಾಟಿಗೆ ಸಂಬಂಧಿಸಿದಂತೆ ಅನುಮತಿಯನ್ನು ಕೋರಲಾಗಿದೆಯೋ ಆ ಪ್ಲಾಟಿನ ವಾಸ್ತವಿಕ ಉದ್ದಗಲಗಳನ್ನು, ನಿರ್ಮಿಸಬೇಕಾದ ಕಟ್ಟಡದ ಗಾತ್ರವನ್ನು ಮತ್ತು ಆ ಪ್ಲಾಟಿನ ಮೇಲೆ ಕಟ್ಟಡದ ಸ್ಥಾನವನ್ನು ಮತ್ತು ಯೋಜನಾ ಪ್ರಾಧಿಕಾರವು ಈ ಬಗ್ಗೆ ಅಗತ್ಯಪಡಿಸಬಹುದಾದಂಥ ಇತರ ಮಾಹಿತಿಯನ್ನು ತೋರಿಸುವ ಅಳತೆ ಪ್ರಕಾರ ಬರೆದ ನಕ್ಷೆಯು ಇರತಕ್ಕದ್ದು.

[1][**14ಎ. ಸ್ಥೂಲ ಅಭಿವೃದ್ಧಿ ಯೋಜನೆಯಲ್ಲಿ ಹೇಳಿರುವ ಭೂ ಬಳಕೆಯನ್ನು ಬದಲಾಯಿಸುವುದು:–** (1) ಒಂದು ಪ್ರದೇಶದ ಸ್ಥೂಲ ಅಭಿವೃದ್ಧಿ ಯೋಜನೆಯು ಕಾರ್ಯಾಚರಣೆಗೆ ಬಂದ ದಿನಾಂಕದ ತರುವಾಯ ಯಾವುದೇ ಕಾಲದಲ್ಲಿ ಯೋಜನಾ ಪ್ರಾಧಿಕಾರವು, ರಾಜ್ಯ ಸರ್ಕಾರದ ಪೂರ್ವಾನುಮೋದನೆ ಪಡೆದು, ಭೂ ಸ್ಥಳದ, ಸ್ವರೂಪದ, ಭೂ ನಕ್ಷೆಯು, ಅಥವಾ ಇತರ ಲೋಪದೋಷಗಳ ಕಾರಣದಿಂದಾಗಿ ಅಥವಾ ಯೋಜನೆಯಲ್ಲಿ ವಿವರಗಳನ್ನು ಪೂರ್ತಿಯಾಗಿ ಸೂಚಿಸಲು ತಪ್ಪಿದ್ದರಿಂದಾಗಿ ಅಥವಾ ಸ್ಥೂಲ ಅಭಿವೃದ್ಧಿ ಯೋಜನೆಯಲ್ಲಿರುವ ಪ್ರಸ್ತಾವಗಳನ್ನು ಕಾರ್ಯಗತಗೊಳಿಸುವುದರಿಂದ ಉಂಟಾಗುವ ಬದಲಾವಣೆಗಳಿಂದಾಗಿ ಅಥವಾ ಯೋಜನೆಯನ್ನು ಜಾರಿಗೊಳಿಸುವ ಮೂಲಕ ಯಾವುದೇ ನಿರ್ದಿಷ್ಟ ಕಾಲದಲ್ಲಿ ಇರುವ ಸಂದರ್ಭಗಳಿಂದಾಗಿ ಅಗತ್ಯವಾಗಬಹುದಾದಂತೆ ಸ್ಥೂಲ ಅಭಿವೃದ್ಧಿ ಯೋಜನೆಯಲ್ಲಿ ಹೇಳಿರುವ ಭೂ ಬಳಕೆಯ ಅಥವಾ ಅಭಿವೃದ್ಧಿಯ ಬದಲಾವಣೆಗೆ ಅನುಮತಿಸಬಹುದು:

ಪರಂತು,–

(ಎ) ಎಲ್ಲಾ ಬದಲಾವಣೆಗಳು ಸಾರ್ವಜನಿಕ ಹಿತಾಸಕ್ತಿಗೆ ಅನುಗುಣವಾಗಿರಬೇಕು;

(ಬಿ) ಪ್ರಸ್ತಾವಿಸಲಾದ ಬದಲಾವಣೆಗಳು ಈ ಅಧಿನಿಯಮದ ಅಥವಾ ಯೋಜನೆಯನ್ನು, ಅಥವಾ ಸ್ಥಳೀಯ ಯೋಜನಾ ಪ್ರದೇಶದೊಳಗಿರುವ ಭೂ ಅಭಿವೃದ್ಧಿಯನ್ನು ಅಥವಾ ಬಳಕೆಯನ್ನು ನಿಯಂತ್ರಿಸುವ ಇತರ ಯಾವುದೇ ಕಾನೂನಿನ ಯಾವುದೇ ಉಪಬಂಧಗಳನ್ನು ಉಲ್ಲಂಘಿಸಬಾರದು; ಮತ್ತು

(ಸಿ) ಅಂಥ ಎಲ್ಲಾ ಬದಲಾವಣೆಗಳ ಪ್ರಸ್ತಾವಗಳನ್ನು ಆ ಪ್ರದೇಶದಲ್ಲಿ ಪ್ರಸಾರದಲ್ಲಿರುವ ಒಂದು ಅಥವಾ ಹೆಚ್ಚು ದೈನಂದಿನ ವೃತ್ತಪತ್ರಿಕೆಗಳಲ್ಲಿ ಪ್ರಕಟಿಸಬೇಕು, ಆ ಪ್ರಕಟಣೆಯಲ್ಲಿ ಯೋಜನಾ ಪ್ರಾಧಿಕಾರವು ನಿರ್ದಿಷ್ಟಪಡಿಸಬಹುದಾದಂತೆ, ಪ್ರಕಟಣೆಯ ದಿನಾಂಕದಿಂದ ಹದಿನೈದು ದಿನಗಳಿಗೆ ಕಡಿಮೆಯಿಲ್ಲದ ಅವಧಿಯೊಳಗೆ ಸಾರ್ವಜನಿಕರಿಂದ ಆ ಬಗ್ಗೆ ಆಕ್ಷೇಪಣೆಗಳನ್ನು ಆಹ್ವಾನಿಸಬೇಕು.

(2) 14ನೇ ಪ್ರಕರಣದ (2)ನೇ ಮತ್ತು (3)ನೇ ಉಪಪ್ರಕರಣದ ಉಪಬಂಧಗಳು ಸ್ಥೂಲ ಅಭಿವೃದ್ಧಿ ಯೋಜನೆಯಲ್ಲಿ ಹೇಳಿರುವ ಭೂ ಬಳಕೆಯ ಅಥವಾ ಅಭಿವೃದ್ಧಿಯ ಬದಲಾವಣೆಗೆ ಯಥೋಚಿತ ವ್ಯತ್ಯಾಸಗಳೊಂದಿಗೆ ಅನ್ವಯವಾಗತಕ್ಕದ್ದು.][1]

1. 1991ರ ಅಧಿನಿಯಮ ಸಂ.17ರ ಮೂಲಕ 19-4-1991 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(3) ಈ ಅಧಿನಿಯಮದಲ್ಲಿ ತದ್ವಿರುದ್ಧವಾದುದು ಏನೇ ಒಳಗೊಂಡಿದ್ದರೂ, ಭೂಬಳಕೆಯಲ್ಲಿ ಅಥವಾ ಅಭಿವೃದ್ಧಿಯಲ್ಲಿ ವಾಣಿಜ್ಯ ಅಥವಾ ಕೈಗಾರಿಕೆಯಿಂದ ವಸತಿಗೆ ಅಥವಾ ಕೈಗಾರಿಕೆಯಿಂದ ವಾಣಿಜ್ಯಕ್ಕೆ ಬದಲಾವಣೆ ಮಾಡಿದ್ದರೆ ಮತ್ತು ಗೊತ್ತುಪಡಿಸಿದ ಫೀಜನ್ನು ಸಂದಾಯ ಮಾಡಿದ್ದರೆ ಸ್ಥಳೀಯ ಯೋಜನಾ ಪ್ರಾಧಿಕಾರಕ್ಕೆ ಆ ಬದಲಾವಣೆಯನ್ನು ಮಾಡುವುದಕ್ಕೆ ಮುಂಚೆ ತಿಳಿಸಿದ್ದರೆ, ಅಂಥ ಭೂಬಳಕೆಯ ಬದಲಾವಣೆಗಾಗಿ ಅಥವಾ ಅಭಿವೃದ್ಧಿಗಾಗಿ ಅನುಮತಿಯನ್ನು ನೀಡಲಾಗಿದೆ ಎಂದು ಭಾವಿಸತಕ್ಕದ್ದು][1].

1. 2005ರ ಅಧಿನಿಯಮ ಸಂಖ್ಯೆ 1ರ ಮೂಲಕ ಉಪ ಪ್ರಕರಣ (3)ನ್ನು 14–2–2005ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][**14ಬಿ. ಅಭಿವೃದ್ಧಿ ಹಕ್ಕುಗಳ ಪ್ರಯೋಜನ:–** ಸ್ಥಳೀಯ ಯೋಜನಾ ಪ್ರದೇಶದಲ್ಲಿನ ಯಾವುದೇ ಪ್ರದೇಶವು ಸಾರ್ವಜನಿಕ ಉದ್ದೇಶಕ್ಕಾಗಿ ಯೋಜನಾ ಪ್ರಾಧಿಕಾರಕ್ಕೆ ಅಥವಾ ಸ್ಥಳೀಯ ಪ್ರಾಧಿಕಾರಕ್ಕೆ ಅಗತ್ಯವಾಗಿದ್ದರೆ ಮತ್ತು ಅಂಥ ಪ್ರದೇಶದಲ್ಲಿ ಒಳಗೊಂಡಿರುವ ಯಾವುದೇ ನಿವೇಶನದ ಅಥವಾ ಭೂಮಿಯ ಒಡೆಯನು ಅದನ್ನು ಉಚಿತವಾಗಿ ಒಪ್ಪಿಸಿದ್ದರೆ ಮತ್ತು ಯೋಜನಾ ಪ್ರಾಧಿಕಾರಕ್ಕೆ ಅಥವಾ ಸ್ಥಳೀಯ ಪ್ರಾಧಿಕಾರಕ್ಕೆ ಪೂರ್ವಾಧಿಗಳಿಂದ ಮುಕ್ತವಾದ ಅದರ ಸ್ವಾಧೀನವನ್ನು ವಹಿಸಿಕೊಟ್ಟರೆ, ಸಂದರ್ಭಾನುಸಾರ ಯೋಜನಾ ಪ್ರಾಧಿಕಾರವು ಅಥವಾ ಸ್ಥಳೀಯ ಪ್ರಾಧಿಕಾರವು, ಈ ಅಧಿನಿಯಮದಲ್ಲಿ ಅಥವಾ ವಿನಿಯಮನಗಳಲ್ಲಿ ಏನೇ ಒಳಗೊಂಡಿದ್ದರೂ, ಆದರೆ ರಾಜ್ಯಸರ್ಕಾರವು ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ನಿರ್ಬಂಧಗಳಿಗೆ ಅಥವಾ ಷರತ್ತುಗಳಿಗೆ ಒಳಪಟ್ಟು, ಒಪ್ಪಿಸಿದ ಭೂ ಪ್ರದೇಶದ ಒಂದುವರೆಯಷ್ಟಕ್ಕೆ ಸಮನಾಗಿರತಕ್ಕಂಥ ಹೆಚ್ಚುವರಿ ನೆಲ ಪ್ರದೇಶದ ರೂಪದಲ್ಲಿ ಅಭಿವೃದ್ಧಿ ಹಕ್ಕುಗಳನ್ನು ಅನುಮತಿಸಬಹುದು. ಹಾಗೆ ಅನುಮತಿಸಿದ ಅಭಿವೃದ್ಧಿ ಹಕ್ಕನ್ನು, ಒಪ್ಪಿಸಿದ ತರುವಾಯ ಉಳಿದ ಪ್ರದೇಶದ ಭಾಗದಲ್ಲಾಗಲಿ ಅಥವಾ ಸ್ಥಳೀಯ ಯೋಜನಾ ಪ್ರದೇಶದಲ್ಲಿ ಎಲ್ಲಿಯೇ ಆಗಲಿ ಸ್ವತಃ ಅಥವಾ ನಿಯಮಿಸಬಹುದಾದಂತೆ ಇತರ ಯಾರೇ ವ್ಯಕ್ತಿಗೆ ವರ್ಗಾಯಿಸುವ ಮೂಲಕವಾಗಿಯೇ ಆಗಲಿ ಉಪಯೋಗಿಸಿಕೊಳ್ಳಬಹುದು. ಒಪ್ಪಿಸಿದ ತರುವಾಯ ಉಳಿದ ಪ್ರದೇಶವು, ವಿನಿಯಮನಗಳ ಪ್ರಕಾರ ಮೂಲ ನಿವೇಶನದ ಅಥವಾ ಭೂಮಿಯ ಬದಲಿಗೆ ಒಪ್ಪಿಸುವ ಮುಂಚೆ ಲಭ್ಯವಿದ್ದಷ್ಟೇ ನೆಲ ಪ್ರದೇಶವನ್ನು ಹೊಂದಿರತಕ್ಕದ್ದು.

1. 2004ರ ಅಧಿನಿಯಮ ಸಂಖ್ಯೆ 23ರ ಮೂಲಕ ಪ್ರಕರಣ 14ಬಿಯನ್ನು 3–6–2004ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**ವಿವರಣೆ.–** ಈ ಪ್ರಕರಣದ ಉದ್ದೇಶಕ್ಕಾಗಿ,–

(ಎ) ಸಾರ್ವಜನಿಕ ಉದ್ದೇಶ ಎಂದರೆ.–

(i) ಈಗ ಇರುವ ರಸ್ತೆಯ ಅಗಲೀಕರಣ ಅಥವಾ ಹೊಸ ರಸ್ತೆಯ ನಿರ್ಮಾಣ;

(ii) ಉದ್ಯಾನವನಗಳು, ಆಟದ ಮೈದಾನಗಳು ಮತ್ತು ಬಯಲು ಸ್ಥಳಗಳು ಅಥವಾ ಯಾವುದೇ ಇತರ ನಾಗರಿಕ ಸೌಕರ್ಯಗಳನ್ನು ಒದಗಿಸುವುದು;

(iii) ರಾಜ್ಯ ಸರ್ಕಾರವು ಅಧಿಸೂಚಿಸಿದ ಪರಂಪರೆ ಕಟ್ಟಡದ ಅಥವಾ ಎಲ್ಲೆ ಕಟ್ಟಿನ ನಿರ್ವಹಣೆ ಅಥವಾ ಮೇಲ್ಪಾಟು;

[1][(iv) ರಾಜ್ಯ ಸರ್ಕಾರವು ಕಾಲಕಾಲಕ್ಕೆ ಅಧಿಸೂಚಿಸಿದ ಯಾವುದೇ ಇತರ ಉದ್ದೇಶ;][1]

1. 2007ರ ಅಧಿನಿಯಮ ಸಂಖ್ಯೆ 2ರ ಮೂಲಕ 20.2.2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ಬಿ) "ಅಭಿವೃದ್ಧಿ ಹಕ್ಕು" ಎಂದರೆ ಅಭಿವೃದ್ಧಿಯನ್ನು ಕೈಗೊಳ್ಳಲು ಅಥವಾ ಭೂಮಿಯನ್ನು ಅಥವಾ ಕಟ್ಟಡವನ್ನು ಅಥವಾ ಅವೆರಡನ್ನೂ ಅಭಿವೃದ್ಧಿಪಡಿಸುವ ಹಕ್ಕು ಎಂದು ಅರ್ಥ;

**ದೃಷ್ಟಾಂತ ಸಂಖ್ಯೆ 1:** "ಎ" ರಸ್ತೆಯಲ್ಲಿ 500 ಚದರ ಮೀಟರುಗಳ ಪ್ಲಾಟ್ ಪ್ರದೇಶದಲ್ಲಿ, ನೆಲ ಪ್ರದೇಶ ಪ್ರಮಾಣ 1.5 ಇದ್ದರೆ,–

| | | |
|---|---|---|
| i. | ಪ್ಲಾಟ್ ಪ್ರದೇಶ | 500 ಚದರ ಮೀಟರುಗಳು |
| ii. | ಅನುಮತಿಸಬೇಕಾದ ನೆಲ ಪ್ರದೇಶದ ಪ್ರಮಾಣ | 1.5 |
| iii. | ಕಟ್ಟಡ ನಿರ್ಮಾಣ ಮಾಡಬಹುದಾದ ನೆಲ ಪ್ರದೇಶ | 500 X 1.5 = 750 ಚದರ ಮೀಟರುಗಳು |
| iv. | ಒಪ್ಪಿಸಿದ ಪ್ರದೇಶ | 100 ಚದರ ಮೀಟರುಗಳು |
| v. | ಅಭಿವೃದ್ಧಿ ಹಕ್ಕುಗಳ ರೂಪದಲ್ಲಿರುವ ಹೆಚ್ಚುವರಿ ನೆಲ ಪ್ರದೇಶ | 150 ಚದರ ಮೀಟರುಗಳು |
| vi. | ಒಪ್ಪಿಸಿದ ತರುವಾಯ ಪ್ಲಾಟ್ ಪ್ರದೇಶ | 500 – 100 = 400 ಚದರ ಮೀಟರುಗಳು |
| vii. | 400 ಚದರ ಮೀಟರುಗಳ ಪ್ಲಾಟ್ ಪ್ರದೇಶದಲ್ಲಿ (ಒಪ್ಪಿಸಿದ ತರುವಾಯ) ಕಟ್ಟಡ ನಿರ್ಮಾಣ ಮಾಡಬಹುದಾದ ನೆಲ ಪ್ರದೇಶ<br>(ಎ) ಅದೇ ಪ್ಲಾಟಿನಲ್ಲಿರುವ ಹೆಚ್ಚುವರಿ ನೆಲ ಪ್ರದೇಶವನ್ನು ಬಳಕೆ ಮಾಡಿರದಿದ್ದರೆ<br>(ಬಿ) ಅದೇ ಪ್ಲಾಟಿನಲ್ಲಿರುವ ಹೆಚ್ಚುವರಿ ನೆಲ ಪ್ರದೇಶವನ್ನು ಬಳಕೆ ಮಾಡಿದ್ದರೆ | : 750 ಚದರ ಮೀಟರುಗಳು<br>: 750+150=900 ಚದರ ಮೀಟರುಗಳು |

**ದೃಷ್ಟಾಂತ ಸಂಖ್ಯೆ 2:** "ಬಿ" ರಸ್ತೆಯಲ್ಲಿನ 500 ಚದರ ಮೀಟರುಗಳ ಪ್ಲಾಟ್ ಪ್ರದೇಶದಲ್ಲಿನ ನೆಲ ಪ್ರದೇಶದ ಪ್ರಮಾಣವು 0.75 ಇದ್ದರೆ:–

| | | |
|---|---|---|
| i. | ಪ್ಲಾಟ್ ಪ್ರದೇಶ | 500 ಚದರ ಮೀಟರುಗಳು |
| ii. | ಅನುಮತಿಸಬಹುದಾದ ನೆಲ ಪ್ರದೇಶದ ಪ್ರಮಾಣ | 0.75 |
| iii. | ಕಟ್ಟಡ ನಿರ್ಮಾಣ ಮಾಡಬಹುದಾದ ನೆಲ ಪ್ರದೇಶ | 500 X 0.75=375 ಚದರ ಮೀಟರುಗಳು |
| iv. | ಒಪ್ಪಿಸಿದ ಪ್ರದೇಶ | 100 ಚದರ ಮೀಟರುಗಳು |
| v. | ಅಭಿವೃದ್ಧಿ ಹಕ್ಕುಗಳ ರೂಪದಲ್ಲಿ ಹೆಚ್ಚುವರಿ ನೆಲ ಪ್ರದೇಶ | 150 ಚದರ ಮೀಟರುಗಳು |
| vi. | ಒಪ್ಪಿಸಿದ ತರುವಾಯದ ಪ್ಲಾಟ್ ಪ್ರದೇಶ | 500 – 100 = 400 ಚದರ ಮೀಟರುಗಳು |
| vii. | 400 ಚದರ ಮೀಟರುಗಳ ಪ್ಲಾಟ್ ಪ್ರದೇಶದಲ್ಲಿ (ಒಪ್ಪಿಸಿದ ತರುವಾಯ) ಕಟ್ಟಡನಿರ್ಮಾಣ ಮಾಡಬಹುದಾದ ನೆಲ ಪ್ರದೇಶ:<br>(ಎ) ಅದೇ ಪ್ಲಾಟಿನಲ್ಲಿರುವ ಹೆಚ್ಚುವರಿ ನೆಲ ಪ್ರದೇಶವನ್ನು ಬಳಕೆ ಮಾಡಿರದಿದ್ದರೆ<br>(ಬಿ) ಅದೇ ಪ್ಲಾಟಿನಲ್ಲಿರುವ ಹೆಚ್ಚುವರಿ ನೆಲ ಪ್ರದೇಶವನ್ನು ಬಳಕೆ ಮಾಡಿದ್ದರೆ | : 375 ಚದರ ಮೀಟರುಗಳು<br>: 375 + 150 = 525 ಚದರ ಮೀಟರುಗಳು |

**ದೃಷ್ಟಾಂತ ಸಂಖ್ಯೆ 3: "ಸಿ"** ರಸ್ತೆಯಲ್ಲಿನ 500 ಚದರ ಮೀಟರುಗಳ ಪ್ಲಾಟ್ ಪ್ರದೇಶದಲ್ಲಿ ನೆಲ ಪ್ರದೇಶದ ಪ್ರಮಾಣವು 0.75 ಆಗಿದ್ದಾಗ ಮತ್ತು "ಎ" ರಸ್ತೆಗೆ ಸಂಬಂಧಿಸಿದಂತೆ ಪ್ರಾಪ್ತವಾದ 150 ಚದರ ಮೀಟರುಗಳ ಅಭಿವೃದ್ಧಿ ಹಕ್ಕನ್ನು ವರ್ಗಾಯಿಸಿರುವಾಗ,–

| | | |
|---|---|---|
| i. | ಪ್ಲಾಟ್ ಪ್ರದೇಶ | 500 ಚದರ ಮೀಟರುಗಳು |
| ii. | ಅನುಮತಿಸಬಹುದಾದ ನೆಲ ಪ್ರದೇಶದ ಪ್ರಮಾಣ | 0.75 |
| iii. | ನಿರ್ಮಾಣ ಮಾಡಬಹುದಾದ ನೆಲ ಪ್ರದೇಶ | 500 X 0.75 = 75 ಚದರ ಮೀಟರುಗಳು |
| iv. | "ಎ" ರಸ್ತೆಯಿಂದ ವರ್ಗಾಯಿಸಿದ ಹೆಚ್ಚುವರಿ ನೆಲ ಪ್ರದೇಶ | 150 ಚದರ ಮೀಟರುಗಳು |
| v. | ಕಟ್ಟಡ ನಿರ್ಮಾಣ ಮಾಡಬಹುದಾದ ಒಟ್ಟು ನೆಲ ಪ್ರದೇಶ | 375 + 150 = 525 ಚದರ ಮೀಟರುಗಳು][1] |

1. 2004ರ ಅಧಿನಿಯಮ ಸಂಖ್ಯೆ 23ರ ಮೂಲಕ ಪ್ರಕರಣ 14ಬಿಯನ್ನು 3–6–2004ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**15. ಕಟ್ಟಡದ ಅಥವಾ ಭೂಮಿಯ ಅಭಿವೃದ್ಧಿಗಾಗಿ ಅನುಮತಿ:–** (1) 14ನೇ ಪ್ರಕರಣದ ಮೇರೆಗೆ ಅನುಮತಿಗಾಗಿ ಅರ್ಜಿಯನ್ನು ಸ್ವೀಕರಿಸಿದ ಮೇಲೆ, ಆ ಯೋಜನಾ ಪ್ರಾಧಿಕಾರವು ಅದನ್ನು ಸ್ವೀಕರಿಸಿದ ಬಗ್ಗೆ ಲಿಖಿತದಲ್ಲಿ ತಲುಪೊಪ್ಪಿಗೆಯನ್ನು ಅರ್ಜಿದಾರನಿಗೆ ಒದಗಿಸತಕ್ಕದ್ದು ಮತ್ತು ಅವಶ್ಯವಾಗಬಹುದಾದಂಥ ವಿಚಾರಣೆಯನ್ನು ಮಾಡಿದ ತರುವಾಯ, ಪ್ರಾರಂಭ ಪ್ರಮಾಣ ಪತ್ರವನ್ನು ಕೊಡಬಹುದು ಅಥವಾ ನಿರಾಕರಿಸಬಹುದು:

ಪರಂತು, ಅಂಥ ಪ್ರಮಾಣ ಪತ್ರವನ್ನು, ರಾಜ್ಯ ಸರ್ಕಾರವು ಈ ಬಗ್ಗೆ ಮಾಡಿದ ಆದೇಶದ ಮೂಲಕ ನಿರ್ದೇಶಿಸಬಹುದಾದಂತೆ ಸಾಮಾನ್ಯ ಅಥವಾ ವಿಶೇಷ ಷರತ್ತುಗಳಿಗೆ ಒಳಪಟ್ಟು ಕೊಡಬಹುದು.

(2) ಯೋಜನಾ ಪ್ರಾಧಿಕಾರವು, ಅಂಥ ತಲುಪೊಪ್ಪಿಗೆಯ ದಿನಾಂಕದಿಂದ ಮೂರು ತಿಂಗಳುಗಳೊಳಗಾಗಿ ಅರ್ಜಿದಾರನಿಗೆ ತನ್ನ ತೀರ್ಮಾನವನ್ನು ತಿಳಿಸದಿದ್ದರೆ, ಅಂಥ ಪ್ರಮಾಣ ಪತ್ರವನ್ನು ಅರ್ಜಿದಾರನಿಗೆ ಕೊಟ್ಟಿರುವುದಾಗಿ ಭಾವಿಸತಕ್ಕದ್ದು:

[1][ಪರಂತು, ಯಾವ ಭೂ ಬಳಕೆಗೆ, ಭೂ ಬಳಕೆಯಲ್ಲಿನ ಬದಲಾವಣೆಗೆ ಅಥವಾ ಅಭಿವೃದ್ಧಿಗೆ ಅನುಮತಿ ಕೋರಲಾಗಿತ್ತೋ ಆ ಭೂ ಬಳಕೆಯು, ಭೂಬಳಕೆಯಲ್ಲಿನ ಬದಲಾವಣೆಯು ಅಥವಾ ಅಭಿವೃದ್ಧಿಯು 13ನೇ ಪ್ರಕರಣದ (3)ನೇ ಉಪ-ಪ್ರಕರಣದ ಮೇರೆಗೆ ಅಂತಿಮವಾಗಿ ಅನುಮೋದಿತವಾದ ಸ್ಥೂಲ ಅಭಿವೃದ್ಧಿ ಯೋಜನೆಗೆ ಮತ್ತು ವಿನಿಯಮನಕ್ಕೆ ಅನುಗುಣವಾಗಿರಬೇಕು.][1]

1. 1991 ರ ಅಧಿನಿಯಮ ಸಂಖ್ಯೆ 17ರ ಮೂಲಕ 19.4.1991 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(3) 16ನೇ ಪ್ರಕರಣದ ಉಪಬಂಧಗಳಿಗೊಳಪಟ್ಟು, ಪ್ರಾರಂಭ ಪ್ರಮಾಣಪತ್ರದ ನಿರಾಕರಣೆಗೆ ಅಥವಾ ಅದರಲ್ಲಿ ಷರತ್ತುಗಳನ್ನು ಸೇರಿಸುವುದಕ್ಕೆ ಅಥವಾ ವಿಧಿಸುವುದಕ್ಕೆ ಯಾವುದೇ ನಷ್ಟ ಪರಿಹಾರವನ್ನು ಸಂದಾಯ ಮಾಡತಕ್ಕದ್ದಲ್ಲ.

(4) ಯಾರೇ ವ್ಯಕ್ತಿಯು, 14ನೇ ಪ್ರಕರಣವನ್ನು ಅಥವಾ ಈ ಪ್ರಕರಣದ (1)ನೇ ಉಪ-ಪ್ರಕರಣವನ್ನು ಉಲ್ಲಂಘಿಸಿ ಯಾವುದೇ ಸ್ವತ್ತಿನ ಮೇಲೆ ಯಾವುದೇ ಕಾಮಗಾರಿಯನ್ನು ಮಾಡಿದರೆ ಅಥವಾ ಅದರ ಯಾವುದೇ ಬಳಕೆಯನ್ನು ಮಾಡಿದರೆ, ಆ ಯೋಜನಾ ಪ್ರಾಧಿಕಾರವು ಲಿಖಿತ ನೋಟೀಸಿನ ಮೂಲಕ ಅಂಥ ವ್ಯಕ್ತಿಗೆ ನಡೆಯುತ್ತಿರುವ ಯಾವುದೇ ಅಂಥ ಕಾಮಗಾರಿಯನ್ನು ನಿಲ್ಲಿಸಲು ಅಥವಾ ಅಂಥ ಯಾವುದೇ ಬಳಕೆಯನ್ನು ಮುಂದುವರಿಸದಿರಲು ನಿರ್ದೇಶಿಸಬಹುದು; ಮತ್ತು ನಿಯಮಿಸಿದ ರೀತಿಯಲ್ಲಿ ವಿಚಾರಣೆಯನ್ನು ನಡೆಸಿದ ತರುವಾಯ, ಅಂಥ ಯಾವುದೇ ಕಾಮಗಾರಿಯನ್ನು ತೆಗೆದುಹಾಕಬಹುದು ಅಥವಾ ಕೆಡವಿ ಹಾಕಬಹುದು ಮತ್ತು ಆ ಭೂಮಿಯನ್ನು ಅದರ ಮೂಲ ಸ್ಥಿತಿಗೆ ತರಬಹುದು ಅಥವಾ ಸಂದರ್ಭಾನುಸಾರ, ಅಂಥ ಬಳಕೆಯನ್ನು ನಿಲ್ಲಿಸಲು ಯಾವುದೇ ಕ್ರಮವನ್ನು ತೆಗೆದುಕೊಳ್ಳಬಹುದು.

(5) ಉಪ – ಪ್ರಕರಣ(4)ರ ಮೇರೆಗೆ ಯೋಜನಾ ಪ್ರಾಧಿಕಾರವು ವಹಿಸಿದ ಯಾವುವೇ ವೆಚ್ಚಗಳು, ತಪ್ಪಿದ ವ್ಯಕ್ತಿಯಿಂದ ಅಥವಾ ಭೂಮಿಯ ಒಡೆಯನಿಂದ ಈ ಅಧಿನಿಯಮದ ಮೇರೆಗೆ ಅಂಥ ಪ್ರಾಧಿಕಾರಕ್ಕೆ ಬಾಕಿಬರಬೇಕಾಗಿರುವ ಮೊತ್ತವಾಗಿರತಕ್ಕದ್ದು.

**ವಿವರಣೆ:–** ಭೂ ಬಳಕೆದಾರನ ಬದಲಾವಣೆಗಾಗಿ ಈ ಪ್ರಕರಣದ ಮೇರೆಗೆ ಅವಶ್ಯವಾದ ಅನುಮತಿಯನ್ನು ಕೊಡುವ ಅಧಿಕಾರವು, 10ನೇ ಪ್ರಕರಣದ (1)ನೇ ಉಪ – ಪ್ರಕರಣದ ಮೇರೆಗೆ ಸ್ಥೂಲ ಅಭಿವೃದ್ಧಿ ಯೋಜನೆಯನ್ನು ಸಿದ್ಧಪಡಿಸುವ ಉದ್ದೇಶದ ಘೋಷಣೆಯನ್ನು ಪ್ರಕಟಿಸಿದ ದಿನಾಂಕಕ್ಕೆ ಮುಂಚೆ, ಅದರ ಮೇಲೆ ನಿರ್ಮಿಸಿದ ಯಾವುದೇ ಕಟ್ಟಡವನ್ನು ಅಥವಾ ಕೈಗೊಂಡ ಯಾವುದೇ ಕಾಮಗಾರಿಯನ್ನು ಆ ಭೂಮಿಯ ಮೇಲೆ ಉಳಿಸಿಕೊಳ್ಳುವುದಕ್ಕಾಗಿ ಅಥವಾ ಸದರಿ ದಿನಾಂಕಕ್ಕೆ ಮುಂಚೆ ಪ್ರಾರಂಭಿಸಿದ ಭೂಮಿಯ ಯಾವುದೇ ಬಳಕೆಯನ್ನು ಮುಂದುವರಿಸುವುದಕ್ಕಾಗಿ ಅನುಮತಿಯನ್ನು ಕೊಡುವ ಅಧಿಕಾರವನ್ನು ಒಳಗೊಳ್ಳತಕ್ಕದ್ದು.

[1][(6) (1)ನೇ ಉಪಪ್ರಕರಣದ ಅಥವಾ (4)ನೇ ಉಪಪ್ರಕರಣದ ಮೇರೆಗೆ ಯೋಜನಾ ಪ್ರಾಧಿಕಾರವು ಕೈಕೊಂಡ ತೀರ್ಮಾನದಿಂದ ಬಾಧಿತನಾದ ಯಾರೇ ವ್ಯಕ್ತಿಯು ನಿಯಮಿಸಬಹುದಾದ ಪ್ರಾಧಿಕಾರಕ್ಕೆ ಅಂತಹ ತೀರ್ಮಾನದ ದಿನಾಂಕದಿಂದ ಮೂವತ್ತು ದಿವಸಗಳೊಳಗೆ ಅಪೀಲನ್ನು ಸಲ್ಲಿಸಬಹುದು.

(7) ನಿಯಮಿಸಲಾದ ಪ್ರಾಧಿಕಾರವು, ಅಪೀಲುದಾರನಿಗೆ ಮತ್ತು ಯೋಜನಾ ಪ್ರಾಧಿಕಾರಕ್ಕೆ ಅಹವಾಲನ್ನು ಹೇಳಿಕೊಳ್ಳಲು ಸೂಕ್ತ ಅವಕಾಶವನ್ನು ಕೊಟ್ಟ ತರುವಾಯ, ಅಪೀಲನ್ನು ಸ್ವೀಕರಿಸಿದ ದಿನಾಂಕದಿಂದ ಸಾಧ್ಯವಾದಷ್ಟು ಮಟ್ಟಿಗೆ ನಾಲ್ಕು ತಿಂಗಳೊಳಗೆ ತಾನು ಸೂಕ್ತವೆಂದು ಭಾವಿಸುವಂತಹ ಆದೇಶಗಳನ್ನು ಹೊರಡಿಸಬಹುದು.][1]

1. 1991ರ ಅಧಿನಿಯಮ ಸಂ.17ರ ಮೂಲಕ ಉಪ ಪ್ರಕರಣ (6) ಮತ್ತು (7) ನ್ನು 19-4-1991 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**16. ಕೆಲವು ಪ್ರಕರಣಗಳಲ್ಲಿ ಅನುಮತಿಯನ್ನು ನಿರಾಕರಿಸಿದಾಗ ಭೂಮಿಯನ್ನು ಖರೀದಿಸಲು ಬಾಧ್ಯತೆ:–** (1) 15ನೇ ಪ್ರಕರಣದ ವಿವರಣೆಯಲ್ಲಿ ಉಲ್ಲೇಖಿಸಿದ ಬಗೆಯ, ಭೂಬಳಕೆಯ ಬದಲಾವಣೆಗಾಗಿ ಅನುಮತಿಯನ್ನು ನಿರಾಕರಿಸಿರುವಲ್ಲಿ ಅಥವಾ ಅದನ್ನು ಷರತ್ತುಗಳಿಗೊಳಪಟ್ಟು ಕೊಟ್ಟಿರುವಲ್ಲಿ, ಆಗ, ಆ ಭೂಮಿಯ ಯಾರೇ ಒಡೆಯನು,-

(ಎ) ಆ ಭೂಮಿಯು ಈಗಿರುವ ಅದರ ಸ್ಥಿತಿಯಲ್ಲಿ ಸೂಕ್ತ ಪ್ರಯೋಜನಕಾರಿಯಾಗಿ ಬಳಕೆಗೆ ಅಸಮರ್ಥವಾಗಿದೆಯೆಂದು; ಅಥವಾ

(ಬಿ) ಅಂಥ ಬಳಕೆಗಾಗಿ ಅನುಮತಿಯನ್ನು, ಷರತ್ತುಗಳಿಗೊಳಪಟ್ಟು ಕೊಟ್ಟಿರುವಂಥ ಪ್ರಕರಣದಲ್ಲಿ, ಆ ಅನುಮತಿಯ ಷರತ್ತುಗಳನ್ನು ಪೂರೈಸುವ ಮೂಲಕ, ಆ ಭೂಮಿಯನ್ನು ಸೂಕ್ತ ಪ್ರಯೋಜನಕಾರಿಯಾಗಿ ಬಳಕೆಗೆ ಸಮರ್ಥವಾಗಿಸುವುದಿಲ್ಲವೆಂದು

- ಕ್ಲೇಮು ಮಾಡಿದರೆ, ಅವನು, ಆ ಯೋಜನಾ ಪ್ರಾಧಿಕಾರವು ಮಾಡಿರುವ ವಿನಿಯಮನಗಳ ಮೂಲಕ ನಿಯಮಿಸಿದ ಕಾಲದೊಳಗೆ ಮತ್ತು ರೀತಿಯಲ್ಲಿ ಈ ಪ್ರಕರಣದ ಉಪಬಂಧಗಳಿಗನುಸಾರವಾಗಿ ಆ ಭೂಮಿಯಲ್ಲಿನ ಅವನ ಹಿತಾಸಕ್ತಿಯನ್ನು ಖರೀದಿಸಲು ಆ ಯೋಜನಾ ಪ್ರಾಧಿಕಾರವನ್ನು ಅಗತ್ಯಪಡಿಸಿ ಆ ಯೋಜನಾ ಪ್ರಾಧಿಕಾರಕ್ಕೆ ನೋಟೀಸನ್ನು (ಇಲ್ಲಿ ಇನ್ನು ಮುಂದೆ 'ಖರೀದಿ ನೋಟೀಸು' ಎಂದು ಉಲ್ಲೇಖಿಸಲಾಗಿದೆ) ಜಾರಿಗೊಳಿಸಬಹುದು.

(2) ಈ ಪ್ರಕರಣದ ಮೇರೆಗೆ ಖರೀದಿ ನೋಟೀಸನ್ನು ಯೋಜನಾ ಪ್ರಾಧಿಕಾರಕ್ಕೆ ಜಾರಿಗೊಳಿಸಿರುವಲ್ಲಿ, ಆ ಯೋಜನಾ ಪ್ರಾಧಿಕಾರವು ತಕ್ಷಣ ನಿರ್ದೇಶಕರ ಮೂಲಕ ರಾಜ್ಯ ಸರ್ಕಾರಕ್ಕೆ ಆ ನೋಟೀಸಿನ ಪ್ರತಿಯನ್ನು ರವಾನಿಸತಕ್ಕದ್ದು, ಮತ್ತು ರಾಜ್ಯ ಸರ್ಕಾರಕ್ಕೆ ಸಂದರ್ಭಾನುಸಾರ, (1)ನೇ ಉಪಪ್ರಕರಣದ (ಎ) ಅಥವಾ (ಬಿ) ಖಂಡದಲ್ಲಿ ನಿರ್ದಿಷ್ಟಪಡಿಸಿರುವ ಷರತ್ತುಗಳನ್ನು ಪೂರೈಸಲಾಗಿದೆ ಎಂದು ಮನದಟ್ಟಾದರೆ ಅದು ಆ ನೋಟೀಸನ್ನು ಸ್ಥಿರೀಕರಿಸತಕ್ಕದ್ದು, ಮತ್ತು ಆ ತರುವಾಯ, ಆ ಯೋಜನಾ ಪ್ರಾಧಿಕಾರವನ್ನು, ಈ ಅಧಿನಿಯಮದ ಉಪಬಂಧಗಳಿಗನುಸಾರವಾಗಿ ಕಡ್ಡಾಯವಾಗಿ ಆ ಒಡೆಯನ ಹಿತಾಸಕ್ತಿಯನ್ನು ಆರ್ಜಿಸಲು ಅಧಿಕೃತಗೊಳಿಸಿರುವುದಾಗಿ, ಮತ್ತು ರಾಜ್ಯ ಸರ್ಕಾರವು ನಿರ್ದೇಶಿಸಬಹುದಾದಂಥ ದಿನಾಂಕದಂದು ಅದಕ್ಕೆ ಸಂಬಂಧಿಸಿದಂತೆ ಆರ್ಜಿಸುವ ನೋಟೀಸನ್ನು ಜಾರಿಗೊಳಿಸಿರುವುದಾಗಿ ಭಾವಿಸತಕ್ಕದ್ದು.

(3) ಈ ಪ್ರಕರಣದ ಮೇರೆಗೆ ಖರೀದಿ ನೋಟೀಸನ್ನು ಜಾರಿ ಮಾಡಿದ ದಿನಾಂಕದಿಂದ ಆರು ತಿಂಗಳುಗಳ ಅವಧಿಯೊಳಗೆ, ರಾಜ್ಯ ಸರ್ಕಾರವು ಆ ನೋಟೀಸನ್ನು ಸ್ಥಿರೀಕರಿಸದಿದ್ದರೆ, ಆ ನೋಟೀಸನ್ನು ಆ ಅವಧಿಯು ಮುಕ್ತಾಯವಾದ ಮೇಲೆ ಸ್ಥಿರೀಕರಿಸಿರುವುದಾಗಿ ಭಾವಿಸತಕ್ಕದ್ದು, ಮತ್ತು ಆ ನೋಟೀಸನ್ನು ಯಾವ ಯೋಜನಾ ಪ್ರಾಧಿಕಾರಕ್ಕೆ ಜಾರಿಗೊಳಿಸಲಾಯಿತೋ ಆ ಯೋಜನಾ ಪ್ರಾಧಿಕಾರವನ್ನು ಸದರಿ ಅವಧಿಯು ಮುಕ್ತಾಯವಾದ ಮೇಲೆ ಈ ಅಧಿನಿಯಮದ ಉಪಬಂಧಗಳಿಗನುಸಾರವಾಗಿ ಕಡ್ಡಾಯವಾಗಿ ಆ ಒಡೆಯನ ಹಿತಾಸಕ್ತಿಯನ್ನು ಆರ್ಜಿಸಲು ಅಧಿಕೃತಗೊಳಿಸಿರುವುದಾಗಿ ಭಾವಿಸತಕ್ಕದ್ದು.

(4) ಈ ಪ್ರಕರಣದ ಮೇರೆಗೆ ಭೂಮಿಯ ಒಡೆಯನ ಹಿತಾಸಕ್ತಿಯ ಕಡ್ಡಾಯ ಆರ್ಜನೆಯನ್ನು ಭೂಆರ್ಜನಾ ಅಧಿನಿಯಮ, 1894 (1894ರ ಕೇಂದ್ರ ಅಧಿನಿಯಮ 1) ರ ಅರ್ಥ ವ್ಯಾಪ್ತಿಯೊಳಗೆ ಸಾರ್ವಜನಿಕ ಉದ್ದೇಶಕ್ಕಾಗಿ ಅವಶ್ಯವಾದ ಭೂಮಿಯ ಆರ್ಜನೆ ಎಂದು ಭಾವಿಸತಕ್ಕದ್ದು.

**17. ಪ್ಲಾಟಿನ ಒಳವಿಭಾಗ ಮಾಡುವುದಕ್ಕಾಗಿ ಅಥವಾ ಖಾಸಗಿ ಬೀದಿಯನ್ನು ರಚಿಸುವುದಕ್ಕಾಗಿ ಮಂಜೂರಾತಿ:–** (1) 10ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಸ್ಥೂಲ ಅಭಿವೃದ್ಧಿ ಯೋಜನೆಯನ್ನು ತಯಾರಿಸುವ ಉದ್ದೇಶದ ಬಗ್ಗೆ ಘೋಷಣೆಯನ್ನು ಪ್ರಕಟಿಸಿದ ದಿನಾಂಕದಂದು ಅಥವಾ ಆ ತರುವಾಯ, ತನ್ನ ಪ್ಲಾಟನ್ನು ಒಳವಿಭಾಗ ಮಾಡಲು ಅಥವಾ ಖಾಸಗಿ ಬೀದಿಯನ್ನು ರಚಿಸಲು ಅಥವಾ ರೂಪಿಸಲು ಉದ್ದೇಶಿಸುವ ಪ್ರತಿಯೊಬ್ಬ ವ್ಯಕ್ತಿಯು, ನಿಯಮಿಸಿದ ವಿವರಗಳೊಂದಿಗೆ ಮೋಜಣಿ ನಕ್ಷೆಯನ್ನು ಯೋಜನಾ ಪ್ರಾಧಿಕಾರಕ್ಕೆ ಮಂಜೂರಾತಿಗಾಗಿ ಒಪ್ಪಿಸತಕ್ಕದ್ದು.

(2) ಯೋಜನಾ ಪ್ರಾಧಿಕಾರವು, ನಿಯಮಿಸಿದ ಅವಧಿಯೊಳಗೆ ಅಂಥ ನಕ್ಷೆಯನ್ನು ಮಾರ್ಪಾಟಿಲ್ಲದೆ ಅಥವಾ ಅದು ವಿಹಿತವೆಂದು ಪರ್ಯಾಲೋಚಿಸುವಂಥ ಮಾರ್ಪಾಟುಗಳಿಗೆ ಮತ್ತು ಷರತ್ತುಗಳಿಗೊಳಪಟ್ಟು ಮಂಜೂರು ಮಾಡಬಹುದು, ಅಥವಾ ಆ ಯೋಜನಾ ಪ್ರಾಧಿಕಾರವು, ಹಾಗೆ ವಿಭಾಗ ಮಾಡುವುದು ಅಥವಾ ರಚಿಸುವುದು, ಸ್ಥೂಲ ಅಭಿವೃದ್ಧಿ ಯೋಜನೆಯ ಪ್ರಸ್ತಾವಗಳಿಗೆ ಯಾವುದೇ ರೀತಿಯಲ್ಲಿ ಸುಸಂಗತವಾಗಿಲ್ಲವೆಂದು ಅಭಿಪ್ರಾಯಪಟ್ಟರೆ, ಮಂಜೂರಾತಿಯನ್ನು ನೀಡಲು ನಿರಾಕರಿಸಬಹುದು.

(3) ಮಂಜೂರಾತಿಯ ನಿರಾಕರಣೆಗೆ ಅಥವಾ ಅದರಲ್ಲಿ ಷರತ್ತುಗಳನ್ನು ಸೇರಿಸುವುದಕ್ಕೆ, ವಿಧಿಸುವುದಕ್ಕೆ ಅಥವಾ ಮಾರ್ಪಾಟು ಮಾಡುವುದಕ್ಕೆ – ಯಾವುದೇ ನಷ್ಟ ಪರಿಹಾರವನ್ನು ಸಂದಾಯ ಮಾಡತಕ್ಕದ್ದಲ್ಲ.

(4) ಯಾರೇ ವ್ಯಕ್ತಿಯು, (1)ನೇ ಉಪಪ್ರಕರಣವನ್ನು ಉಲ್ಲಂಘಿಸಿ ಅಥವಾ (2)ನೇ ಉಪಪ್ರಕರಣದ ಮೇರೆಗೆ ಕೊಟ್ಟ ಮಂಜೂರಾತಿಯಲ್ಲಿರುವ ಮಾರ್ಪಾಟುಗಳನ್ನು ಮತ್ತು ಷರತ್ತುಗಳನ್ನು ಉಲ್ಲಂಘಿಸಿ ಅಥವಾ ಸದರಿ (2)ನೇ ಉಪಪ್ರಕರಣದ ಮೇರೆಗಿನ ಮಂಜೂರಾತಿಯನ್ನು ನಿರಾಕರಿಸಿದ್ದರೂ ಯಾವುದೇ ಕಾಮಗಾರಿಯನ್ನು ಮಾಡಿದರೆ, ಯೋಜನಾ ಪ್ರಾಧಿಕಾರವು, ಲಿಖಿತ ನೋಟೀಸಿನ ಮೂಲಕ ಅಂಥ ವ್ಯಕ್ತಿಗೆ ನಡೆಯುತ್ತಿರುವ ಯಾವುದೇ ಕಾಮಗಾರಿಯನ್ನು ನಿಲ್ಲಿಸಲು ನಿರ್ದೇಶಿಸಬಹುದು ಮತ್ತು ನಿಯಮಿಸಿದ ರೀತಿಯಲ್ಲಿ ವಿಚಾರಣೆಯನ್ನು ಮಾಡಿದ ತರುವಾಯ ಯಾವುದೇ ಕಾಮಗಾರಿಯನ್ನು ತೆಗೆದುಹಾಕಬಹುದು ಅಥವಾ ಕೆಡವಿ ಹಾಕಬಹುದು ಅಥವಾ ಆ ಭೂಮಿಯನ್ನು ಅದರ ಮೂಲಸ್ಥಿತಿಗೆ ತರಬಹುದು.

(5) ಉಪ – ಪ್ರಕರಣ(4)ರ ಮೇರೆಗೆ ಯೋಜನಾ ಪ್ರಾಧಿಕಾರವು ವಹಿಸಿದ ಯಾವುವೇ ವೆಚ್ಚಗಳು, ತಪ್ಪಿದ ವ್ಯಕ್ತಿಯಿಂದ ಈ ಅಧಿನಿಯಮದ ಮೇರೆಗೆ ಯೋಜನಾ ಪ್ರಾಧಿಕಾರಕ್ಕೆ ಬಾಕಿಬರಬೇಕಾಗಿರುವ ಮೊತ್ತ ಆಗಿರತಕ್ಕದ್ದು.

[1][(6) ಉಪ – ಪ್ರಕರಣ(2)ರ ಅಥವಾ (4)ನೇ ಉಪಪ್ರಕರಣದ ಮೇರೆಗೆ ಯೋಜನಾ ಪ್ರಾಧಿಕಾರವು ಕೈಕೊಂಡ ತೀರ್ಮಾನದಿಂದ ಬಾಧಿತನಾದ ಯಾರೇ ವ್ಯಕ್ತಿಯು, ನಿಯಮಿಸಬಹುದಾದ ಪ್ರಾಧಿಕಾರಕ್ಕೆ ಅಂಥ ತೀರ್ಮಾನದ ದಿನಾಂಕದಿಂದ ಮೂವತ್ತು ದಿವಸಗಳೊಳಗೆ ಅಪೀಲು ಸಲ್ಲಿಸಬಹುದು.

(7) ನಿಯಮಿಸಲಾದ ಪ್ರಾಧಿಕಾರವು, ಅಪೀಲುದಾರನಿಗೆ ಮತ್ತು ಯೋಜನಾ ಪ್ರಾಧಿಕಾರಕ್ಕೆ ಅಹವಾಲನ್ನು ಹೇಳಿಕೊಳ್ಳಲು ಸೂಕ್ತ ಅವಕಾಶವನ್ನು ಕೊಟ್ಟ ತರುವಾಯ, ಆ ಅಪೀಲನ್ನು ಸ್ವೀಕರಿಸಿದ ದಿನಾಂಕದಿಂದ ಸಾಧ್ಯವಾದಷ್ಟು ಮಟ್ಟಿಗೆ ನಾಲ್ಕು ತಿಂಗಳೊಳಗೆ ತಾನು ಸೂಕ್ತವೆಂದು ಭಾವಿಸುವಂಥ ಆದೇಶವನ್ನು ಹೊರಡಿಸಬಹುದು.][1]

1. 1991ರ ಅಧಿನಿಯಮ ಸಂ.17ರ ಮೂಲಕ ಉಪಪ್ರಕರಣ (6) ಮತ್ತು (7)ನ್ನು 19-4-1991 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**18. ಭೂಮಿಯ ಅಥವಾ ಕಟ್ಟಡದ ಬಳಕೆಯಲ್ಲಿ ಬದಲಾವಣೆಗಾಗಿ ಅನುಮತಿಯ ಕೆಲವು ಪ್ರಕರಣಗಳಲ್ಲಿ ಫೀಜಿನ ವಸೂಲಿ:–** [1][(1) ಭೂ ಬಳಕೆಯಲ್ಲಿ ಬದಲಾವಣೆಗಾಗಿ ಅಥವಾ ಭೂಮಿಯ ಅಥವಾ ಕಟ್ಟಡದ ಅಭಿವೃದ್ಧಿಗಾಗಿ 14ಎ ಪ್ರಕರಣದ ಅಥವಾ 14ಬಿ ಪ್ರಕರಣದ ಅಥವಾ 15ನೇ ಪ್ರಕರಣದ ಅಥವಾ 17ನೇ ಪ್ರಕರಣದ ಮೇರೆಗೆ ಅನುಮತಿಯನ್ನು ಕೊಟ್ಟಿರುವಲ್ಲಿ ಮತ್ತು ಭೂಬಳಕೆಯಲ್ಲಿ ಅಂಥ ಬದಲಾವಣೆಯು ಅಥವಾ ಅಭಿವೃದ್ಧಿಯು ಒಡೆಯನಿಗೆ ಉತ್ತಮ ಆದಾಯವನ್ನು ಕೊಡುವ ಸಾಧ್ಯತೆ ಇರುವಲ್ಲಿ, ಯೋಜನಾ ಪ್ರಾಧಿಕಾರವು, ಭೂಬಳಕೆಯಲ್ಲಿ ಅಂಥ ಬದಲಾವಣೆಗೆ ಅಥವಾ ಭೂಮಿಯ ಅಥವಾ ಕಟ್ಟಡದ ಅಭಿವೃದ್ಧಿಗೆ ಅನುಮತಿಸುವುದಕ್ಕಾಗಿ ನಿಯಮಿಸಿದ ರೀತಿಯಲ್ಲಿ ಆ ಭೂಮಿಯ ಅಥವಾ ಕಟ್ಟಡದ ಮೌಲ್ಯದಲ್ಲಿ ಹೆಚ್ಚಳವಾಗುವುದೆಂದು ಅಂದಾಜು ಮಾಡಿದ ಮೊತ್ತದ ಮೂರನೇ ಒಂದರಷ್ಟನ್ನು ಮೀರದಂತೆ ಗೊತ್ತುಪಡಿಸಿದ ಫೀಜನ್ನು ವಿಧಿಸಬಹುದು.][1]

1. 2004ರ ಅಧಿನಿಯಮ ಸಂಖ್ಯೆ 23ರ ಮೂಲಕ 3-6-2004ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

"(1ಎ) ಅವನ ಪ್ಲಾಟ್‌ನ್ನು ವಿಭಾಗ ಮಾಡುವುದಕ್ಕಾಗಿ ಅಥವಾ ಪ್ಲಾಟ್‌ನಲ್ಲಿ ಖಾಸಗಿ ರಸ್ತೆಯನ್ನು ನಿರ್ಮಾಣ ಮಾಡುವುದಕ್ಕಾಗಿ ಯಾವುದೇ ಯೋಜನಾ ಪ್ರಾಧಿಕಾರಕ್ಕೆ 17ನೇ ಪ್ರಕರಣದ ಮೇರೆಗೆ ಮಂಜೂರಾತಿಗೆ ಅರ್ಜಿಯನ್ನು ಸಲ್ಲಿಸಿದರೆ, ಅಂಥ ಯೋಜನಾ ಪ್ರಾಧಿಕಾರವು, ಯೋಜನಾ ಪ್ರದೇಶದ ಒಳಗಿರುವ ಕೆರೆಗಳ ಅಥವಾ ಜಲನಿಕಾಯಗಳ ಪುನಃಶ್ಚೇತನದ ಉದ್ದೇಶಕ್ಕಾಗಿ ಪ್ರತಿ ಒಂದು ಎಕರೆ ಭೂಮಿಗೆ ಒಂದು ಲಕ್ಷ ರೂಪಾಯಿಗಳ ದರದಲ್ಲಿ ಹೆಚ್ಚುವರಿ ಶುಲ್ಕವನ್ನು ವಿಧಿಸಬಹುದು ಮತ್ತು ಸಂಗ್ರಹಿಸಬಹುದು."[1]

1. 2012ರ ಕರ್ನಾಟಕ ಅಧಿನಿಯಮ ಸಂಖ್ಯೆ 06ರ ಮೂಲಕ ಉಪಪ್ರಕರಣ (1ಎ)ನ್ನು ದಿನಾಂಕ 3.10.2009 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) (1)ನೇ ಉಪಪ್ರಕರಣದ ಮೇರೆಗೆ ಫೀಜನ್ನು ವಿಧಿಸುವುದರಿಂದ ಬಾಧಿತನಾದ ಯಾರೇ ವ್ಯಕ್ತಿಯು, ಆ ಬದಲಾವಣೆಯು ಅಥವಾ ಅಭಿವೃದ್ಧಿಯು ಒಡೆಯನಿಗೆ ಉತ್ತಮ ಆದಾಯವನ್ನು ತಂದು ಕೊಡುವ ಸಾಧ್ಯತೆ ಇಲ್ಲ ಎಂಬ ಕಾರಣದ ಮೇಲೆ, ಅಧಿಕಾರ ವ್ಯಾಪ್ತಿ ಹೊಂದಿರುವ ಜಿಲ್ಲಾ ನ್ಯಾಯಾಲಯಕ್ಕೆ ನಿಯಮಿಸಬಹುದಾದಂಥ ಅವಧಿಯೊಳಗೆ, ಅಪೀಲನ್ನು ಮಾಡಿಕೊಳ್ಳಬಹುದು. ಅಂಥ ಅಪೀಲಿನ ಮೇಲೆ ಜಿಲ್ಲಾ ನ್ಯಾಯಾಲಯದ ತೀರ್ಮಾನವು ಅಂತಿಮವಾಗಿರತಕ್ಕದ್ದು.

[1][(3) ರಾಜ್ಯ ಸರ್ಕಾರವು, ಯಾವುದೇ ಕಾನೂನಿನ ಮೂಲಕ ಅಥವಾ ಅದರ ಮೇರೆಗೆ ರಚಿಸಿದ ಮತ್ತು ರಾಜ್ಯ ಸರ್ಕಾರದ ಅಥವಾ ಕೇಂದ್ರ ಸರ್ಕಾರದ ಒಡೆತನದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ಯಾವುದೇ ಮಂಡಳಿಗೆ, ಪ್ರಾಧಿಕಾರಕ್ಕೆ ಅಥವಾ ಸಂಸ್ಥೆಗೆ ಅಥವಾ ಯಾವುದೇ ಕಂಪನಿ ಅಥವಾ ವ್ಯಕ್ತಿಯು ಪ್ರೋತ್ಸಾಹಿಸಿದ ಅಥವಾ ಅನುಷ್ಠಾನಗೊಳಿಸಿದ ಮತ್ತು ರಾಜ್ಯ ಸರ್ಕಾರವು ಅಥವಾ ಕೇಂದ್ರ ಸರ್ಕಾರವು ಅನುಮೋದಿಸಿದ ಮೂಲಸೌಕರ್ಯ ಪ್ರಾಜೆಕ್ಟಿಗೆ (1)ನೇ ಉಪ ಪ್ರಕರಣದ ಮೇರೆಗೆ ನಿರ್ದಿಷ್ಟಪಡಿಸಿದ ಫೀಜಿನ ಸಂದಾಯದಿಂದ ವಿನಾಯತಿ ನೀಡಬಹುದು.

**ವಿವರಣೆ:–** ಈ ಪ್ರಕರಣ ಮತ್ತು 18ಎ ಪ್ರಕರಣದ ಉದ್ದೇಶಕ್ಕಾಗಿ "ಮೂಲಸೌಕರ್ಯ ಪ್ರಾಜೆಕ್ಟ್" ಎಂದರೆ,–

(ಎ) ರಸ್ತೆ, ಸೇತುವೆ, ವಿಮಾನ ನಿಲ್ದಾಣ, ಬಂದರು, ಒಳನಾಡು ಜಲಮಾರ್ಗ ಮತ್ತು ಒಳನಾಡು ಬಂದರುಗಳು, ರೈಲು ವ್ಯವಸ್ಥೆ ಅಥವಾ ರಾಜ್ಯ ಸರ್ಕಾರವು ಕಾಲಕಾಲಕ್ಕೆ ಅಧಿಸೂಚಿಸಬಹುದಾದಂಥ ಅದೇ ಸ್ವರೂಪದ ಯಾವುದೇ ಇತರ ಸಾರ್ವಜನಿಕ ಸೌಲಭ್ಯ;

(ಬಿ) ಆ ಪ್ರಾಜೆಕ್ಟಿನ ಅವಿಭಾಜ್ಯ ಅಂಗವಾಗಿರುವ ಗೃಹ ನಿರ್ಮಾಣ ಅಥವಾ ಇತರೆ ಚಟುವಟಿಕೆಗಳನ್ನು ಒಳಗೊಂಡ ಹೆದ್ದಾರಿ ಯೋಜನೆ;

(ಸಿ) ನೀರು ಸರಬರಾಜು ಯೋಜನೆ, ನೀರಾವರಿ ಯೋಜನೆ, ನೈರ್ಮಲ್ಯ ಮತ್ತು ಒಳಚರಂಡಿ ವ್ಯವಸ್ಥೆ;

(ಡಿ) ರಾಜ್ಯ ಸರ್ಕಾರವು ಕಾಲಕಾಲಕ್ಕೆ ಅಧಿಸೂಚಿಸಬಹುದಾದಂತೆ ಒಂದು ನೂರು ಕೋಟಿ ರೂಪಾಯಿಗಳಿಗೆ ಕಡಿಮೆಯಲ್ಲದ ಹೂಡಿಕೆಯ ಪ್ರವಾಸೋದ್ಯಮ ಯೋಜನೆ.][1]

1. 2004ರ ಅಧಿನಿಯಮ ಸಂಖ್ಯೆ 23ರ ಮೂಲಕ 3-6-2004ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][**18ಎ. ಉಪಕರವನ್ನು ಮತ್ತು ಮೇಲ್ತೆರಿಗೆಯನ್ನು ವಿಧಿಸುವುದು ಮತ್ತು ಸಂಗ್ರಹಿಸುವುದು:-** (1) ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಯೋಜನಾ ಪ್ರಾಧಿಕಾರವು, ಭೂಮಿಯ ಅಥವಾ ಕಟ್ಟಡದ ಅಭಿವೃದ್ಧಿಗಾಗಿ ಅನುಮತಿ ನೀಡುವಾಗ ಅಂಥ ಭೂಮಿಯ ಅಥವಾ ಕಟ್ಟಡದ ಮಾಲೀಕನಿಗೆ,-

(i) ಯಾವುದೇ ನೀರು ಸರಬರಾಜು ಯೋಜನೆಯನ್ನು ಕಾರ್ಯಗತಗೊಳಿಸುವ ಉದ್ದೇಶಕ್ಕಾಗಿ ಉಪಕರವನ್ನು;

(ii) ವರ್ತುಲ ರಸ್ತೆಯನ್ನು ನಿರ್ಮಿಸುವ ಉದ್ದೇಶಕ್ಕಾಗಿ ಮೇಲ್ತೆರಿಗೆಯನ್ನು;

(iii) ಕೊಳಗೇರಿಗಳ ಸುಧಾರಣೆಯ ಉದ್ದೇಶಕ್ಕಾಗಿ ಉಪಕರವನ್ನು; ಮತ್ತು

(iv) ತ್ವರಿತ ಸಮೂಹ ಸಾರಿಗೆ ವ್ಯವಸ್ಥೆಯನ್ನು ಸ್ಥಾಪಿಸುವ ಉದ್ದೇಶಕ್ಕಾಗಿ, ಮೇಲ್ತೆರಿಗೆಯನ್ನು

(v) ಕೆರೆಗಳ ಅಥವಾ ಜಲನಿಕಾಯಗಳ ಪುನಃಶ್ಚೇತನ ಉಪಕರವನ್ನು[1]

1. 2012ರ ಕರ್ನಾಟಕ ಅಧಿನಿಯಮ ಸಂಖ್ಯೆ 06ರ ಮೂಲಕ 1ನೇ ಉಪಪ್ರಕರಣದ (ಐ) ನೇ ಖಂಡವನ್ನು ದಿನಾಂಕ 3.10.2009 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ

- ಮೇಲಿನಂತೆ ವಿಧಿಸಬಹುದಾದವುಗಳೆಲ್ಲವೂ ಸೇರಿ, ಭೂಮಿಯ ಅಥವಾ ಕಟ್ಟಡದ ಮಾರುಕಟ್ಟೆ ಮೌಲ್ಯದ ಹತ್ತನೇ ಒಂದರಷ್ಟನ್ನು ಮೀರದಂತೆ ನಿಯಮಿಸಬಹುದಾದಂಥ ದರಗಳಲ್ಲಿ ವಿಧಿಸಬಹುದು ಮತ್ತು ಸಂಗ್ರಹಿಸಬಹುದು.

(2) (1)ನೇ ಉಪ ಪ್ರಕರಣದ ಮೇರೆಗೆ ವಿಧಿಸಿದ ಉಪಕರವನ್ನು ಮತ್ತು ಮೇಲ್ತೆರಿಗೆಯನ್ನು, ನಿಯಮಿಸಬಹುದಾದಂಥ ರೀತಿಯಲ್ಲಿ ನಿರ್ಧರಿಸತಕ್ಕದ್ದು ಮತ್ತು ಸಂಗ್ರಹಿಸತಕ್ಕದ್ದು.

(3) ಈ ಪ್ರಕರಣದ ಮೇರೆಗೆ ಉಪಕರವನ್ನು ಅಥವಾ ಮೇಲ್ತೆರಿಗೆಯನ್ನು ವಿಧಿಸಿರುವುದರಿಂದ, ನಿರ್ಧರಿಸಿರುವುದರಿಂದ ಮತ್ತು ಸಂಗ್ರಹಿಸಿರುವುದರಿಂದ ಬಾಧಿತನಾದ ಯಾರೇ ವ್ಯಕ್ತಿಯು, ಆದೇಶದ ದಿನಾಂಕದಿಂದ ಮೂವತ್ತು ದಿನಗಳ ಒಳಗಾಗಿ ನಿಯಮಿಸಿದ ಪ್ರಾಧಿಕಾರಕ್ಕೆ ಅಪೀಲು ಸಲ್ಲಿಸಬಹುದು. ಆ ಬಗ್ಗೆ ಆ ಪ್ರಾಧಿಕಾರದ ನಿರ್ಣಯವು ಅಂತಿಮವಾಗಿರತಕ್ಕದ್ದು.

(4) ನಿಯಮಿಸಿದ ಪ್ರಾಧಿಕಾರವು, ಅಪೀಲುದಾರನಿಗೆ ಮತ್ತು ಯೋಜನಾ ಪ್ರಾಧಿಕಾರಕ್ಕೆ ಅಹವಾಲು ಹೇಳಿಕೊಳ್ಳಲು ಯುಕ್ತ ಅವಕಾಶವನ್ನು ಕೊಟ್ಟ ತರುವಾಯ, ತಾನು ಸೂಕ್ತವೆಂದು ಭಾವಿಸಬಹುದಾದಂಥ ಆದೇಶವನ್ನು ಮಾಡಬಹುದು.

(5) ರಾಜ್ಯ ಸರ್ಕಾರವು, ಯಾವುದೇ ಕಾನೂನಿನ ಮೂಲಕ ಅಥವಾ ಅದರ ಮೇರೆಗೆ ರಚಿಸಿದ ಮತ್ತು ರಾಜ್ಯ ಸರ್ಕಾರದ ಅಥವಾ ಕೇಂದ್ರ ಸರ್ಕಾರದ ಒಡೆತನದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ಯಾವುದೇ ಮಂಡಳಿಗೆ, ಪ್ರಾಧಿಕಾರಕ್ಕೆ ಅಥವಾ ಸಂಸ್ಥೆಗೆ ಅಥವಾ ಯಾವುದೇ ಕಂಪನಿ ಅಥವಾ ವ್ಯಕ್ತಿಯು ಪ್ರೋತ್ಸಾಹಿಸಿದ ಅಥವಾ ಅನುಷ್ಠಾನಗೊಳಿಸಿದ ಮತ್ತು ರಾಜ್ಯ ಸರ್ಕಾರವು ಅಥವಾ ಕೇಂದ್ರ ಸರ್ಕಾರವು ಅನುಮೋದಿಸಿದ ಮೂಲ ಸೌಕರ್ಯ ಪ್ರಾಜೆಕ್ಟಿಗೆ (1)ನೇ ಉಪ ಪ್ರಕರಣದ ಮೇರೆಗೆ ವಿಧಿಸಬಹುದಾದ ಉಪಕರ ಅಥವಾ ಮೇಲ್ತೆರಿಗೆಯ ಸಂದಾಯದಿಂದ ವಿನಾಯಿತಿ ನೀಡಬಹುದು.][1]

1. 2004ರ ಅಧಿನಿಯಮ ಸಂಖ್ಯೆ 23ರ ಮೂಲಕ 19-10-1992ರಿಂದ ಜಾರಿಗೆ ಬರುವಂತೆ ಸೇರಿಸಿರುವುದಾಗಿ ಭಾವಿಸತಕ್ಕದ್ದು.

## ಅಧ್ಯಾಯ - IV

## [1][ಬೃಹತ್ ಯೋಜನೆಯ ಜಾರಿ][1]

1. 2005ರ ಅಧಿನಿಯಮ ಸಂಖ್ಯೆ 1ರ ಮೂಲಕ 14-2-2005ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][**19.** xxx

**20.** xxx

**21.** xxx

**22.** xxx

**23.** xxx][1]

1. 2005ರ ಅಧಿನಿಯಮ ಸಂಖ್ಯೆ 1ರ ಮೂಲಕ 14-2-2005ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][**24. ಸಮಗ್ರ ಅಭಿವೃದ್ಧಿ ಯೋಜನೆಯ ಜಾರಿ:-** 14ನೇ ಪ್ರಕರಣ, 14ಎ ಪ್ರಕರಣ, 15ನೇ ಪ್ರಕರಣ, 16ನೇ ಪ್ರಕರಣ, 17ನೇ ಪ್ರಕರಣ, 18ನೇ ಪ್ರಕರಣ ಮತ್ತು 18ಎ ಪ್ರಕರಣಗಳ ಉಪಬಂಧಗಳು ಸಮಗ್ರ ಅಭಿವೃದ್ಧಿ ಯೋಜನೆಯ ಜಾರಿಗೆ ಯಥೋಚಿತ ವ್ಯತ್ಯಾಸಗಳೊಂದಿಗೆ ಅನ್ವಯವಾಗತಕ್ಕದ್ದು][1].

1. 2004ರ ಅಧಿನಿಯಮ ಸಂಖ್ಯೆ 23ರ ಮೂಲಕ 3-6-2004ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][25. XXX][1]

1. 2005ರ ಅಧಿನಿಯಮ ಸಂಖ್ಯೆ 1ರ ಮೂಲಕ 14-2-2005ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

## ಅಧ್ಯಾಯ – V

### ಪಟ್ಟಣದ ಯೋಜಿತ ಕಾರ್ಯಯೋಜನೆಗಳು

**26. ಪಟ್ಟಣದ ಯೋಜಿತ ಕಾರ್ಯಯೋಜನೆಯನ್ನು ಸಿದ್ಧಪಡಿಸುವುದು ಮತ್ತು ಅದರ ಒಳಾಂಶಗಳು:–** (1) ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು, ಯೋಜನಾ ಪ್ರಾಧಿಕಾರವು, [1][13ನೇ ಪ್ರಕರಣದ (4)ನೇ ಉಪಪ್ರಕರಣದ ಮೇರೆಗೆ ಪ್ರಕಟಿಸಿದ ಬೃಹತ್ ಯೋಜನೆಯಲ್ಲಿನ][1] ಪ್ರಸ್ತಾವಗಳನ್ನು ಕಾರ್ಯಗತಗೊಳಿಸುವ ಉದ್ದೇಶಕ್ಕಾಗಿ, ತನ್ನ ಅಧಿಕಾರ ವ್ಯಾಪ್ತಿಯೊಳಗಿನ ಪ್ರದೇಶಕ್ಕಾಗಿ ಅಥವಾ ಅದರ ಯಾವುದೇ ಭಾಗಕ್ಕಾಗಿ ಒಂದು ಅಥವಾ ಹೆಚ್ಚು ಪಟ್ಟಣದ ಯೋಜಿತ ಕಾರ್ಯಯೋಜನೆಗಳನ್ನು ಸಿದ್ಧಪಡಿಸಬಹುದು.

1. 2005ರ ಅಧಿನಿಯಮ ಸಂಖ್ಯೆ 1ರ ಮೂಲಕ 14–2–2005ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) ಅಂಥ ಪಟ್ಟಣದ ಯೋಜಿತ ಕಾರ್ಯಯೋಜನೆಯು ಈ ಕೆಳಕಂಡ ಯಾವುದೇ ವಿಷಯಕ್ಕಾಗಿ ಉಪಬಂಧಗಳನ್ನು ಕಲ್ಪಿಸಬಹುದು, ಎಂದರೆ,–

(ಎ) ಖಾಲಿ ಇದ್ದರೆ ಅಥವಾ ಈಗಾಗಲೇ ಬೆಳವಣಿಗೆಯಾಗಿದ್ದರೆ, ಭೂಮಿಯ ಮೋಜಣಿ ರಚನೆ ಮಾಡುವುದು ಅಥವಾ ಪುನಃ ಮೋಜಣಿ ರಚನೆ ಮಾಡುವುದು;

(ಬಿ) ತಗ್ಗು, ಜೌಗು ಅಥವಾ ಅನಾರೋಗ್ಯಕರ ಪ್ರದೇಶಗಳನ್ನು ಭರ್ತಿ ಮಾಡುವುದು ಅಥವಾ ಅವುಗಳನ್ನು ಉಪಯೋಗಕ್ಕೆ ತರುವುದು ಅಥವಾ ಭೂಮಿಯನ್ನು ಮಟ್ಟಗೊಳಿಸುವುದು;

(ಸಿ) ಹೊಸ ಬೀದಿಗಳ ಅಥವಾ ರಸ್ತೆಗಳ ಮೋಜಣಿ ರಚನೆ, ಬೀದಿಗಳ, ರಸ್ತೆಗಳ ಮತ್ತು ಸಂಪರ್ಕಗಳ ನಿರ್ಮಾಣ, ಮಾರ್ಗಪಲ್ಲಟ, ವಿಸ್ತರಣೆ, ಬದಲಾವಣೆ, ಸುಧಾರಣೆ ಮತ್ತು ಅವುಗಳ ನಿಲುಗಡೆ;

(ಡಿ) ಕಟ್ಟಡಗಳು, ಸೇತುವೆಗಳು ಮತ್ತು ಇತರ ನಿರ್ಮಿತಿಗಳ ನಿರ್ಮಾಣ, ಬದಲಾವಣೆ, ಮತ್ತು ಅವುಗಳನ್ನು ತೆಗೆದು ಹಾಕುವುದು;

(ಇ) ರಸ್ತೆಗಳಿಗಾಗಿ, ಬಯಲು ಸ್ಥಳಗಳಿಗಾಗಿ, ತೋಟಗಳಿಗಾಗಿ, ಮನರಂಜನಾ ಮೈದಾನಗಳಿಗಾಗಿ, ಶಾಲೆಗಳಿಗಾಗಿ, ಮಾರುಕಟ್ಟೆಗಳಿಗಾಗಿ, ಹಸಿರುಪಟ್ಟಿಗಳಿಗಾಗಿ ಮತ್ತು ಡೈರಿಗಳಿಗಾಗಿ, ಸಾರಿಗೆ ಸೌಲಭ್ಯಗಳಿಗಾಗಿ ಮತ್ತು ಎಲ್ಲಾ ಬಗೆಯ ಸಾರ್ವಜನಿಕ ಉದ್ದೇಶಗಳಿಗಾಗಿ ಭೂಮಿಯನ್ನು ಹಂಚುವುದು ಅಥವಾ ಮೀಸಲಿಡುವುದು;

(ಎಫ್) ಗ್ರಾಮಸಾರ ಚರಂಡಿ, ಭೂಮಿಯ ಮೇಲಿನ ಅಥವಾ ಒಳಗಿನ ಚರಂಡಿ ಮತ್ತು ಗ್ರಾಮಸಾರ ವಿಲೆಯನ್ನು ಒಳಗೊಂಡು ಚರಂಡಿ;

(ಜಿ) ದೀಪದ ವ್ಯವಸ್ಥೆ;

(ಹೆಚ್) ನೀರು ಸರಬರಾಜು;

(ಐ) ಚಾರಿತ್ರಿಕ ಅಥವಾ ರಾಷ್ಟ್ರೀಯ ಹಿತಾಸಕ್ತಿಯ ಅಥವಾ ಪ್ರಕೃತಿ ಸೌಂದರ್ಯ ವಸ್ತುಗಳ ಮತ್ತು ಧಾರ್ಮಿಕ ಉದ್ದೇಶಗಳಿಗಾಗಿ ವಾಸ್ತವಿಕವಾಗಿ ಉಪಯೋಗಿಸಿದ ಕಟ್ಟಡಗಳ ಸಂರಕ್ಷಣೆ;

(ಜೆ) ಕಟ್ಟಡಗಳ ಸುತ್ತಲೂ ಬಿಡಬೇಕಾದ ಖಾಲಿ ಜಾಗದ ಬಗ್ಗೆ ಷರತ್ತುಗಳನ್ನು ಮತ್ತು ನಿರ್ಬಂಧಗಳನ್ನು ವಿಧಿಸುವುದು, ಪ್ಲಾಟಿಗೆ ಕಟ್ಟಡ ಪ್ರದೇಶದ ಶೇಕಡ ಪ್ರಮಾಣ, ನಿರ್ದಿಷ್ಟಪಡಿಸಿದ ಪ್ರದೇಶಗಳಲ್ಲಿ ಅನುಮತಿಸಿದ ಕಟ್ಟಡಗಳ ಸಂಖ್ಯೆ, ಗಾತ್ರ, ಎತ್ತರ ಮತ್ತು ಸ್ವರೂಪ, ಯಾವ ಉದ್ದೇಶಗಳಿಗಾಗಿ ಕಟ್ಟಡಗಳನ್ನು ಅಥವಾ ನಿರ್ದಿಷ್ಟ ಪಡಿಸಿದ ಪ್ರದೇಶಗಳನ್ನು ನಿಗದಿಪಡಿಸಬಹುದೋ ಅಥವಾ ನಿಗದಿಪಡಿಸಬಾರದೋ ಆ ಉದ್ದೇಶಗಳು, ಪ್ಲಾಟುಗಳ ಒಳವಿಭಾಗ, ಯುಕ್ತ ಅವಧಿಗಳಲ್ಲಿ ಯಾವುದೇ ಪ್ರದೇಶದಲ್ಲಿನ ಆಕ್ಷೇಪಾರ್ಹ ಭೂ ಬಳಕೆದಾರರನ್ನು ಮುಂದುವರಿಸದೆ ಇರುವುದು, ಯಾವುದೇ ಕಟ್ಟಡಕ್ಕಾಗಿ ವಾಹನ ನಿಲುಗಡೆ ಜಾಗ ಮತ್ತು ಸರಕುಗಳನ್ನು ಹೇರುವ ಮತ್ತು ಇಳಿಸುವ ಜಾಗ ಮತ್ತು ಮುಂಚಾಚುಗಳ ಮತ್ತು ಜಾಹೀರಾತು ಚಿಹ್ನೆಗಳ ಗಾತ್ರಗಳು;

(ಕೆ) ಕಾರ್ಯ ಯೋಜನೆಯನ್ನು ಸರಿಯಾಗಿ ಕಾರ್ಯಗತಗೊಳಿಸುವುದಕ್ಕೆ ಅವಶ್ಯವಾಗಬಹುದಾದಷ್ಟರ ಮಟ್ಟಿಗೆ ರಾಜ್ಯ ವಿಧಾನ ಮಂಡಲದ ಯಾವುದೇ ಅಧಿನಿಯಮದ ಅಥವಾ ಯಾವ ಅಧಿನಿಯಮಗಳನ್ನು ರಾಜ್ಯ ವಿಧಾನ ಮಂಡಲವು ತಿದ್ದುಪಡಿ ಮಾಡಲು ಸಕ್ಷಮವಾಗಿರುವುದೋ ಆ ಯಾವುದೇ ಅಧಿನಿಯಮದ ಮೇರೆಗೆ ರಚಿಸಿದ ಅಥವಾ ಹೊರಡಿಸಿದ ಯಾವುದೇ ನಿಯಮದ, ಉಪವಿಧಿಯ, ವಿನಿಯಮನದ, ಅಧಿಸೂಚನೆಯ ಅಥವಾ ಆದೇಶದ ಅಮಾನತ್ತು;

(ಎಲ್) ನಿಯಮಿಸಬಹುದಾದಂತೆ ಈ ಅಧಿನಿಯಮದ ಉದ್ದೇಶಗಳಿಗೆ ಅಸಂಗತವಲ್ಲದಂಥ ಇತರ ವಿಷಯ.

**27. ಪ್ರವೇಶದ ಹಕ್ಕು:–** ಯಾವುದೇ ಪಟ್ಟಣದ ಯೋಜಿತ ಕಾರ್ಯಯೋಜನೆಯನ್ನು ಮಾಡುವ ಅಥವಾ ಜಾರಿಗೊಳಿಸುವ ಉದ್ದೇಶಕ್ಕಾಗಿ, ಯೋಜನಾಪ್ರಾಧಿಕಾರವು ಅಧಿಕೃತಗೊಳಿಸಿದ ಯಾರೇ ವ್ಯಕ್ತಿಯು ಅಥವಾ ಈ ಅಧಿನಿಯಮದ ಮೇರೆಗೆ ಕ್ರಮಬದ್ಧವಾಗಿ ನೇಮಕಗೊಂಡ ಅಥವಾ ಅಧಿಕೃತಗೊಳಿಸಿದ ಯಾರೇ ಲೋಕ ನೌಕರನು ಅಥವಾ ವ್ಯಕ್ತಿಯು, ಒಡೆಯನಿಗೆ, ಅಧಿಭೋಗದಾರನಿಗೆ ಅಥವಾ ಯಾವುದೇ ಭೂಮಿಯಲ್ಲಿ ಹಿತಾಸಕ್ತಿಯನ್ನು ಹೊಂದಿರುವ ಇತರ ವ್ಯಕ್ತಿಗೆ ನಿಯಮಿಸಬಹುದಾದಂಥ ನೋಟೀಸನ್ನು ಕೊಟ್ಟ ತರುವಾಯ, ಅಂಥ ಭೂಮಿಯ ಮೇಲೆ ಪ್ರವೇಶಿಸಬಹುದು, ಮೋಜಣಿ ಮಾಡಬಹುದು ಮತ್ತು ಎಲ್ಲೆ ಗುರುತು ಮಾಡಬಹುದು ಮತ್ತು ಅಂಥ ಉದ್ದೇಶಕ್ಕಾಗಿ ಎಲ್ಲಾ ಅವಶ್ಯಕ ಕೆಲಸಗಳನ್ನು ಮಾಡಬಹುದು.

**28. ಯಾವ ಭೂಮಿಗೆ ಸಂಬಂಧಿಸಿದಂತೆ ಪಟ್ಟಣದ ಯೋಜಿತ ಕಾರ್ಯಯೋಜನೆಯನ್ನು ಸಿದ್ಧಪಡಿಸಬಹುದೋ ಆ ಭೂಮಿ:–** (1) ಪಟ್ಟಣದ ಯೋಜಿತ ಕಾರ್ಯಯೋಜನೆಯನ್ನು, ಈ ಅಧಿನಿಯಮದ ಉಪಬಂಧಗಳಿಗೆ ಅನುಸಾರವಾಗಿ ಯಾವ ಭೂಮಿಯು,–

(i) ಅಭಿವೃದ್ಧಿಯಾಗುತ್ತಿರುವುದೋ;

(ii) ಕಟ್ಟಡ ಉದ್ದೇಶಗಳಿಗಾಗಿ ಬಳಕೆ ಮಾಡುವ ಸಂಭವವಿರುವುದೋ; ಮತ್ತು

(iii) ಅದರಲ್ಲಿ ಈಗಾಗಲೇ ಕಟ್ಟಲಾಗಿದೆಯೋ

– ಅಂಥ ಯಾವುದೇ ಭೂಮಿಗೆ ಸಂಬಂಧಿಸಿದಂತೆ ಸಿದ್ಧಪಡಿಸಬಹುದು.

(2) "ಕಟ್ಟಡ ಉದ್ದೇಶಗಳಿಗಾಗಿ ಬಳಕೆ ಮಾಡುವ ಸಂಭವವಿರುವ ಭೂಮಿ" ಎಂಬ ಪದಾವಳಿಯು ಖಾಲಿ ಜಾಗಗಳಾಗಿ, ರಸ್ತೆಗಳಾಗಿ, ಬೀದಿಗಳಾಗಿ, ಉದ್ಯಾನವನಗಳಾಗಿ, ವಿಹಾರ ಅಥವಾ ಮನರಂಜನಾ ಮೈದಾನಗಳಾಗಿ, ವಾಹನ ನಿಲುಗಡೆ ಜಾಗಗಳಾಗಿ ಅಥವಾ ಈ ಉದ್ದೇಶಕ್ಕಾಗಿ ಬಳಕೆ ಮಾಡುವ ಸಂಭವವಿರುವ ಅಥವಾ ಕಟ್ಟಡ ಕಾಮಗಾರಿಯ ಸ್ವರೂಪದ್ದಾಗಿರಲಿ ಅಥವಾ ಇಲ್ಲದಿರಲಿ, ಪಟ್ಟಣ ಯೋಜಿತ ಕಾರ್ಯಯೋಜನೆಗೆ ಪ್ರಾಸಂಗಿಕವಾದ ಭೂಮಿಯ ಮೇಲೆ ಅಥವಾ ಅದರ ಕೆಳಗೆ ಯಾವುದೇ ಕಾಮಗಾರಿಯನ್ನು ನಿರ್ವಹಿಸುವ ಉದ್ದೇಶಕ್ಕಾಗಿನ ಯಾವುದೇ ಭೂಮಿಯನ್ನು ಒಳಗೊಳ್ಳತಕ್ಕದ್ದು.

**29. ಕಾರ್ಯಯೋಜನೆಯನ್ನು ಸಿದ್ಧಪಡಿಸುವ ಉದ್ದೇಶದ ಬಗ್ಗೆ ಘೋಷಣೆ:–** (1) 28ನೇ ಪ್ರಕರಣದಲ್ಲಿ ಉಲ್ಲೇಖಿಸಿದಂತೆ ಯಾವುದೇ ಅಂಥ ಭೂಮಿಯ ಮೇಲೆ ಅಥವಾ 26ನೇ ಪ್ರಕರಣದಲ್ಲಿ ಉಲ್ಲೇಖಿಸಿದ ಯಾವುದೇ ಅಂಥ ಪ್ರದೇಶದ ಮೇಲೆ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಯೋಜನಾ ಪ್ರಾಧಿಕಾರವು, ನಿರ್ಣಯದ ಮೂಲಕ ಯಾವುದೇ ಅಂಥ ಇಡೀ ಭೂಮಿಗೆ ಅಥವಾ ಅಂಥ ಪ್ರದೇಶಕ್ಕೆ ಅಥವಾ ಅದರ ಯಾವುದೇ ಭಾಗಕ್ಕೆ ಸಂಬಂಧಿಸಿದಂತೆ ಪಟ್ಟಣ ಯೋಜನಾ ಕಾರ್ಯಯೋಜನೆಯನ್ನು ಸಿದ್ಧಪಡಿಸುವ ತನ್ನ ಉದ್ದೇಶವನ್ನು ಘೋಷಿಸಬಹುದು.

(2) ಅಂಥ ಘೋಷಣೆಯ ದಿನಾಂಕದಿಂದ ಇಪ್ಪತ್ತೊಂದು ದಿವಸಗಳೊಳಗೆ, (ಇಲ್ಲಿ ಇನ್ನು ಮುಂದೆ ಕಾರ್ಯಯೋಜನೆಯನ್ನು ಸಿದ್ಧಪಡಿಸುವ ಉದ್ದೇಶದ ಘೋಷಣೆ ಎಂದು ಉಲ್ಲೇಖಿಸಲಾಗಿದೆ) ಯೋಜನಾ ಪ್ರಾಧಿಕಾರವು, ಅದನ್ನು ನಿಯಮಿಸಿದ ರೀತಿಯಲ್ಲಿ ಪ್ರಕಟಿಸತಕ್ಕದ್ದು ಮತ್ತು ಅದರ ಒಂದು ಪ್ರತಿಯನ್ನು ನಿರ್ದೇಶಕರ ಮುಖಾಂತರ ರಾಜ್ಯ ಸರ್ಕಾರಕ್ಕೆ ರವಾನಿಸತಕ್ಕದ್ದು.

(3) ಯೋಜನಾ ಪ್ರಾಧಿಕಾರವು, ಯಾವ ಪ್ರದೇಶವನ್ನು ಪಟ್ಟಣ ಯೋಜನಾ ಕಾರ್ಯಯೋಜನೆಯಲ್ಲಿ ಸೇರಿಸಲು ಉದ್ದೇಶಿಸಿದೆಯೋ ಆ ಪ್ರದೇಶವನ್ನು ತೋರಿಸುವ ಯೋಜನೆಯನ್ನು ನಿರ್ದೇಶಕರ ಮುಖಾಂತರ ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು.

(4) ಯೋಜನೆಯ ಪ್ರತಿಯು ಯೋಜನಾ ಪ್ರಾಧಿಕಾರದ ಕಚೇರಿಯಲ್ಲಿ ಸಾರ್ವಜನಿಕರ ಪರಿಶೀಲನೆಗೆ ಮುಕ್ತವಾಗಿರತಕ್ಕದ್ದು.

**30. ಕರಡು ಕಾರ್ಯಯೋಜನೆಯನ್ನು ಸಿದ್ಧಪಡಿಸುವುದು ಮತ್ತು ಅದರ ಪ್ರಕಟಣೆ:–** (1) 29ನೇ ಪ್ರಕರಣದ ಮೇರೆಗೆ ಕಾರ್ಯಯೋಜನೆಯನ್ನು ಸಿದ್ಧಪಡಿಸುವ ಉದ್ದೇಶದ ಘೋಷಣೆಯ ದಿನಾಂಕದಿಂದ ಹನ್ನೆರಡು ತಿಂಗಳುಗಳೊಳಗೆ, ಯೋಜನಾ ಪ್ರಾಧಿಕಾರವು, ನಿರ್ದೇಶಕರೊಂದಿಗೆ ಸಮಾಲೋಚಿಸಿ, ಯಾವ ಪ್ರದೇಶಕ್ಕೆ ಸಂಬಂಧಿಸಿದಂತೆ ಘೋಷಣೆಯನ್ನು ಮಾಡಲಾಗಿದೆಯೋ ಆ ಪ್ರದೇಶಕ್ಕಾಗಿ ಕರಡು ಕಾರ್ಯಯೋಜನೆಯನ್ನು ಸಿದ್ಧಪಡಿಸತಕ್ಕದ್ದು ಮತ್ತು ಅದನ್ನು ನಿಯಮಿಸಿದ ರೀತಿಯಲ್ಲಿ ಪ್ರಕಟಿಸತಕ್ಕದ್ದು:

ಪರಂತು, ಆ ಬಗ್ಗೆ ಯೋಜನಾ ಪ್ರಾಧಿಕಾರವು ಸಲ್ಲಿಸಿದ ಅರ್ಜಿಯ ಮೇಲೆ, ರಾಜ್ಯ ಸರ್ಕಾರವು ಕಾಲಕಾಲಕ್ಕೆ, ಅಧಿಸೂಚನೆಯ ಮೂಲಕ ಮೇಲೆ ಹೇಳಿದ ಅವಧಿಯನ್ನು ಆರು ತಿಂಗಳುಗಳನ್ನು ಮೀರದಂತೆ ನಿರ್ದಿಷ್ಟಪಡಿಸಬಹುದಾದಂಥ ಅವಧಿಗೆ ವಿಸ್ತರಿಸಬಹುದು.

(2) ಉಪ–ಪ್ರಕರಣ(1)ರ ಮೇರೆಗೆ ನಿರ್ದಿಷ್ಟಪಡಿಸಿದ ಅವಧಿಯೊಳಗೆ ಅಥವಾ ಹಾಗೆ ವಿಸ್ತರಿಸಿದ ಅವಧಿಯೊಳಗೆ ಯೋಜನಾ ಪ್ರಾಧಿಕಾರವು ಆ ಕರಡು ಕಾರ್ಯಯೋಜನೆಯನ್ನು ಸಿದ್ಧಪಡಿಸದಿದ್ದರೆ ಮತ್ತು ಅದನ್ನು ಪ್ರಕಟಿಸದಿದ್ದರೆ, ರಾಜ್ಯ ಸರ್ಕಾರವು ಅಥವಾ ಈ ಬಗ್ಗೆ ರಾಜ್ಯ ಸರ್ಕಾರವು ಅಧಿಕೃತಗೊಳಿಸಿದ ಅಧಿಕಾರಿಯು, ಯೋಜನಾ ಪ್ರಾಧಿಕಾರವು ಯಾವ ಪ್ರದೇಶಕ್ಕೆ ಸಂಬಂಧಿಸಿದಂತೆ ಕರಡು ಕಾರ್ಯಯೋಜನೆಯನ್ನು ಸಿದ್ಧಪಡಿಸುವ ಉದ್ದೇಶದ ಬಗ್ಗೆ ಘೋಷಣೆಯನ್ನು ಮಾಡಿದೆಯೋ, ಆ ಪ್ರದೇಶಕ್ಕಾಗಿ ಕರಡು ಕಾರ್ಯಯೋಜನೆಯನ್ನು, ಹಾಗೆ ವಿಸ್ತರಿಸಿದ ಅವಧಿಯು ಮುಕ್ತಾಯವಾದ ದಿನಾಂಕದಿಂದ ಒಂಬತ್ತು ತಿಂಗಳುಗಳ ಇನ್ನೂ ಹೆಚ್ಚಿನ ಅವಧಿಯೊಳಗೆ ನಿಯಮಿಸಿದ ರೀತಿಯಲ್ಲಿ ಸಿದ್ಧಪಡಿಸಬಹುದು ಮತ್ತು ಅದನ್ನು ಪ್ರಕಟಿಸಬಹುದು.

(3) ಅಂಥ ಪ್ರಕಟಣೆಯನ್ನು (2)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಇನ್ನೂ ಹೆಚ್ಚಿನ ಅವಧಿಯೊಳಗೆ ರಾಜ್ಯ ಸರ್ಕಾರವು ಮಾಡದಿದ್ದರೆ, ಆ ಕಾರ್ಯಯೋಜನೆಯನ್ನು ಸಿದ್ಧಪಡಿಸುವ ಉದ್ದೇಶದ ಬಗೆಗಿನ ಘೋಷಣೆಯು ರದ್ದಾಗತಕ್ಕದ್ದು ಮತ್ತು ಅಂಥ ಘೋಷಣೆಯ ದಿನಾಂಕದಿಂದ ಮೂರು ವರ್ಷಗಳ ಅವಧಿಯು ಗತಿಸುವವರೆಗೆ ಯೋಜನಾ ಪ್ರಾಧಿಕಾರವು ಅದೇ ಪ್ರದೇಶಕ್ಕಾಗಿ ಅಥವಾ ಅದರ ಯಾವುದೇ ಭಾಗಕ್ಕಾಗಿ ಯಾವುದೇ ಪಟ್ಟಣ ಯೋಜನಾ ಕಾರ್ಯಯೋಜನೆಯನ್ನು ಸಿದ್ಧಪಡಿಸುವ ತನ್ನ ಉದ್ದೇಶವನ್ನು ಘೋಷಿಸುವುದಕ್ಕೆ ಸಕ್ಷಮವಾಗಿರತಕ್ಕದ್ದಲ್ಲ.

**31. ಕಾರ್ಯಯೋಜನೆಯನ್ನು ಸಿದ್ಧಪಡಿಸಲು ಯೋಜನಾ ಪ್ರಾಧಿಕಾರವನ್ನು ಅಗತ್ಯಪಡಿಸಲು ರಾಜ್ಯ ಸರ್ಕಾರದ ಅಧಿಕಾರ:–** (1) 29 ಮತ್ತು 30ನೇ ಪ್ರಕರಣಗಳಲ್ಲಿ ಏನೇ ಒಳಗೊಂಡಿದ್ದರೂ, ರಾಜ್ಯ ಸರ್ಕಾರವು, ಯಾವುದೇ ಯೋಜನಾ ಪ್ರಾಧಿಕಾರಕ್ಕೆ ಸಂಬಂಧಿಸಿದಂತೆ, ತಾನು ಅವಶ್ಯವೆಂದು ಭಾವಿಸುವಂಥ ವಿಚಾರಣೆಯನ್ನು ಮಾಡಿದ ತರುವಾಯ ಅಧಿಸೂಚನೆಯ ಮೂಲಕ 28ನೇ ಪ್ರಕರಣದ ಮೇರೆಗೆ ಯಾವ ಭೂಮಿಗೆ ಸಂಬಂಧಿಸಿದಂತೆ ಪಟ್ಟಣ ಯೋಜನಾ ಕಾರ್ಯಯೋಜನೆಯನ್ನು ಸಿದ್ಧಪಡಿಸಬಹುದಾಗಿದೆಯೋ ಆ ಯಾವುದೇ ಭೂಮಿಗೆ ಸಂಬಂಧಿಸಿದಂತೆ ಕರಡು ಕಾರ್ಯಯೋಜನೆಯನ್ನು ನಿಯಮಿಸಿದ ರೀತಿಯಲ್ಲಿ ಸಿದ್ಧಪಡಿಸಬೇಕೆಂದು ಮತ್ತು ಪ್ರಕಟಿಸಬೇಕೆಂದು ಮತ್ತು ತನ್ನ ಮಂಜೂರಾತಿಗಾಗಿ, ನಿರ್ದೇಶಕರ ಮೂಲಕ ಅದನ್ನು ಒಪ್ಪಿಸಬೇಕೆಂದು ಯೋಜನಾ ಪ್ರಾಧಿಕಾರವನ್ನು ಅಗತ್ಯಪಡಿಸಬಹುದು.

(2) ಈ ಅಧಿನಿಯಮದ ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳ ಉದ್ದೇಶಕ್ಕಾಗಿ, ರಾಜ್ಯ ಸರ್ಕಾರವು, (1)ನೇ ಉಪಪ್ರಕರಣದ ಮೇರೆಗೆ ಅಗತ್ಯಪಡಿಸಿರುವುದನ್ನು 29ನೇ ಪ್ರಕರಣದ ಮೇರೆಗೆ ಕಾರ್ಯಯೋಜನೆಯನ್ನು ಸಿದ್ಧಪಡಿಸುವ ಉದ್ದೇಶದ ಬಗೆಗಿನ ಘೋಷಣೆ ಎಂದು ಭಾವಿಸತಕ್ಕದ್ದು.

**32. ಕರಡು ಕಾರ್ಯಯೋಜನೆಯ ಒಳಾಂಶಗಳು:–** ಕರಡು ಕಾರ್ಯಯೋಜನೆಯು ಈ ಕೆಳಕಂಡ ವಿವರಗಳನ್ನು ಒಳಗೊಂಡಿರತಕ್ಕದ್ದು, ಎಂದರೆ,–

(ಎ) ಪ್ರತಿಯೊಂದು ಮೂಲ ಪ್ಲಾಟಿನ ವಿಸ್ತೀರ್ಣ, ಒಡೆತನ ಮತ್ತು ಹಿಡುವಳಿ ಯಾವ ಬಳಕೆಗಳಿಗಾಗಿ ಆ ಭೂಮಿಯನ್ನು ಉಪಯೋಗಿಸಬೇಕಾಗಿದೆಯೋ ಆ ಬಳಕೆಗಳ ಸಾಮಾನ್ಯ ಸೂಚನೆಯೊಂದಿಗೆ 26ನೇ ಪ್ರಕರಣದ (2)ನೇ ಉಪಪ್ರಕರಣದ (ಇ) ಖಂಡದ ಮೇರೆಗೆ ಹಂಚಲಾದ ಅಥವಾ ಮೀಸಲಿಡಲಾದ ಭೂಮಿ ಮತ್ತು ಅಂಥ ಭೂಮಿಯನ್ನು ಯಾವ ನಿಬಂಧನೆಗಳು ಮತ್ತು ಷರತ್ತುಗಳಿಗೆ ಒಳಪಟ್ಟು ಅಂಥ ಬಳಕೆಗಳಿಗೆ ಉಪಯೋಗಿಸಬೇಕಾಗಿದೆಯೋ ಆ ನಿಬಂಧನೆಗಳು ಮತ್ತು ಷರತ್ತುಗಳು;

(ಬಿ) ಮೂಲ ಪ್ಲಾಟುಗಳ ಎಲ್ಲೆ ಗೆರೆಗಳನ್ನು ಎಷ್ಟು ವ್ಯಾಪ್ತಿಯವರೆಗೆ ಬದಲಾಯಿಸಲು ಉದ್ದೇಶಿಸಲಾಗಿದೆಯೋ ಆ ವ್ಯಾಪ್ತಿ;

(ಸಿ) ಯೋಜನಾ ಪ್ರಾಧಿಕಾರವು ಭರಿಸಬೇಕಾದ ಕಾರ್ಯಯೋಜನೆಯ ನಿವ್ವಳ ಖರ್ಚಿನ ಅಂದಾಜು;

(ಡಿ) 26ನೇ ಪ್ರಕರಣದ (2)ನೇ ಉಪಪ್ರಕರಣದ ಅಂಥ ಖಂಡಗಳ ಮೇರೆಗೆ ಕಾರ್ಯಯೋಜನೆಗೆ ಅನ್ವಯವಾಗಬಹುದಾದ ಎಲ್ಲಾ ವಿವರಗಳ ಸಂಪೂರ್ಣ ವರ್ಣನೆ;

(ಇ) ಖಾಲಿ ಇದ್ದರೆ ಅಥವಾ ಈಗಾಗಲೇ ಬೆಳವಣಿಗೆಯಾಗಿದ್ದರೆ ಭೂಮಿಯ ಮೋಜಣಿ ರಚನೆ ಮಾಡುವುದು ಅಥವಾ ಪುನಃ ಮೋಜಣಿ ರಚನೆ ಮಾಡುವುದು;

(ಎಫ್) ತಗ್ಗು, ಜೌಗು ಅಥವಾ ಅನಾರೋಗ್ಯಕರ ಪ್ರದೇಶಗಳನ್ನು ಭರ್ತಿ ಮಾಡುವುದು ಅಥವಾ ಅವುಗಳನ್ನು ಉಪಯೋಗಕ್ಕೆ ತರುವುದು ಅಥವಾ ಭೂಮಿಯನ್ನು ಮಟ್ಟಗೊಳಿಸುವುದು; ಮತ್ತು

(ಜಿ) ಯಾವುದೇ ಇತರ ನಿಯಮಿಸಿದ ವಿವರಗಳು.

**33. ಪುನರ್‌ರಚಿತ ಪ್ಲಾಟು:–** (1) ಕರಡು ಕಾರ್ಯಯೋಜನೆಯಲ್ಲಿ ಪ್ರತಿಯೊಂದು ಪುನರ್‌ರಚಿತ ಪ್ಲಾಟಿನ ಗಾತ್ರ ಮತ್ತು ಆಕಾರವನ್ನು, ಕಟ್ಟಡದ ಉದ್ದೇಶಗಳಿಗಾಗಿ ಅದು ಸೂಕ್ತವಾಗಬಹುದಾದಷ್ಟರ ಮಟ್ಟಿಗೆ ನಿರ್ಧರಿಸತಕ್ಕದ್ದು ಮತ್ತು ಆ ಪ್ಲಾಟು ಈಗಾಗಲೇ ಬೆಳವಣಿಗೆಯಾಗಿರುವಲ್ಲಿ, ಆ ಕಟ್ಟಡವು ಸಾಧ್ಯವಾದಷ್ಟು ಮಟ್ಟಿಗೆ ಖಾಲಿಜಾಗಗಳಿಗೆ ಸಂಬಂಧಿಸಿದಂತೆ ಕಾರ್ಯಯೋಜನೆಯ ಉಪಬಂಧಗಳನ್ನು ಪಾಲಿಸಿದೆ ಎಂಬುದನ್ನು ಸುನಿಶ್ಚಿತಪಡಿಸಿಕೊಳ್ಳತಕ್ಕದ್ದು.

(2) (1)ನೇ ಉಪಪ್ರಕರಣದ ಉದ್ದೇಶಕ್ಕಾಗಿ ಆ ಕರಡು ಕಾರ್ಯಯೋಜನೆಯು,–

(ಎ) ಮೂಲ ಪ್ಲಾಟಿನ ಎಲ್ಲೆ ಗೆರೆಗಳನ್ನು ಬದಲಾವಣೆ ಮಾಡುವ ಮೂಲಕ ಪುನರ್‌ರಚಿತ ಪ್ಲಾಟನ್ನು ರೂಪಿಸುವ;

(ಬಿ) ಹೊಂದಿಕೊಂಡಿರುವ ಭೂಮಿಗಳನ್ನು ಪೂರ್ಣವಾಗಿ ಅಥವಾ ಭಾಗಶಃ ವರ್ಗಾವಣೆ ಮಾಡುವ ಮೂಲಕ ಪುನರ್‌ರಚಿತ ಪ್ಲಾಟನ್ನು ರೂಪಿಸುವ;

(ಸಿ) ಒಡೆಯರ ಸಮ್ಮತಿಯೊಂದಿಗೆ ಯಾವ ಎರಡು ಅಥವಾ ಹೆಚ್ಚು ಮೂಲ ಪ್ಲಾಟುಗಳ ಪ್ರತಿಯೊಂದನ್ನು ಪ್ರತ್ಯೇಕ ಒಡೆತನದಲ್ಲಿ ಅಥವಾ ಜಂಟಿ ಒಡೆತನದಲ್ಲಿ ಧಾರಣ ಮಾಡಲಾಗಿದೆಯೋ ಆ ಎರಡು ಅಥವಾ ಹೆಚ್ಚು ಮೂಲ ಪ್ಲಾಟುಗಳನ್ನು ಇನ್ನು ಮುಂದೆ ಎಲ್ಲೆ ಗೆರೆಗಳ ಬದಲಾವಣೆಯೊಂದಿಗೆ ಅಥವಾ ಅದಿಲ್ಲದೆ ಪುನರ್‌ರಚಿತ ಪ್ಲಾಟು ಎಂದು ಸಾಮಾನ್ಯ ಒಡೆತನದಲ್ಲಿ ಧಾರಣ ಮಾಡತಕ್ಕದ್ದೆಂದು ಉಪಬಂಧ ಕಲ್ಪಿಸುವ;

(ಡಿ) ಕಾರ್ಯಯೋಜನೆಯ ಮುಂದುವರಿಕೆಯಲ್ಲಿ ಭೂಮಿಯ ಸ್ವಾಧೀನವನ್ನು ಕಳೆದುಕೊಂಡ ಯಾರೇ ಒಡೆಯನಿಗೆ ಪ್ಲಾಟನ್ನು ಹಂಚುವ;

(ಇ) ಪ್ಲಾಟಿನ ಒಡೆತನವನ್ನು ಒಬ್ಬ ವ್ಯಕ್ತಿಯಿಂದ ಇನ್ನೊಬ್ಬನಿಗೆ ವರ್ಗಾಯಿಸುವ

– ಪ್ರಸ್ತಾವಗಳನ್ನು ಒಳಗೊಂಡಿರಬಹುದು.

**34. ಆಕ್ಷೇಪಣೆಗಳ ಪರಿಶೀಲನೆ ಮತ್ತು ಕರಡು ಕಾರ್ಯಯೋಜನೆಯ ಮಂಜೂರಾತಿ:–** (1) 30ನೇ ಪ್ರಕರಣದ (1)ನೇ ಉಪಪ್ರಕರಣದ ಅಥವಾ ಸಂದರ್ಭಾನುಸಾರ (2)ನೇ ಉಪಪ್ರಕರಣದ ಮೇರೆಗೆ ಕರಡು ಕಾರ್ಯಯೋಜನೆಯನ್ನು ಪ್ರಕಟಿಸಿದ ದಿನಾಂಕದಿಂದ ಒಂದು ತಿಂಗಳೊಳಗೆ, ಅಂಥ ಕಾರ್ಯಯೋಜನೆಯಿಂದ ಬಾಧಿತನಾದ ಯಾರೇ ವ್ಯಕ್ತಿಯು, ಅಂಥ ಕಾರ್ಯಯೋಜನೆಗೆ ಸಂಬಂಧಪಟ್ಟಂತೆ ಯಾವುದೇ ಆಕ್ಷೇಪಣೆಯನ್ನು ಯೋಜನಾ ಪ್ರಾಧಿಕಾರಕ್ಕೆ ಲಿಖಿತದಲ್ಲಿ ತಿಳಿಸಿದರೆ, ಯೋಜನಾ ಪ್ರಾಧಿಕಾರವು ಅಂಥ ಆಕ್ಷೇಪಣೆಯನ್ನು ಪರಿಶೀಲಿಸತಕ್ಕದ್ದು ಮತ್ತು ರಾಜ್ಯ ಸರ್ಕಾರಕ್ಕೆ ಆ ಕರಡು ಕಾರ್ಯಯೋಜನೆಯನ್ನು ಒಪ್ಪಿಸುವುದಕ್ಕೆ ಮುಂಚೆ ಯಾವುದೇ ಕಾಲದಲ್ಲಿ ಅದು ಸೂಕ್ತವೆಂದು ಯೋಚಿಸುವಂಥ ರೀತಿಯಲ್ಲಿ ಅಂಥ ಕಾರ್ಯಯೋಜನೆಯನ್ನು ಇಲ್ಲಿ ಇನ್ನು ಮುಂದೆ ಉಪಬಂಧಿಸಿರುವಂತೆ ಮಾರ್ಪಾಟು ಮಾಡಬಹುದು.

(2) ಯೋಜನಾ ಪ್ರಾಧಿಕಾರವು, 30ನೇ ಪ್ರಕರಣದ (1)ನೇ ಉಪಪ್ರಕರಣದ ಅಥವಾ (2)ನೇ ಉಪಪ್ರಕರಣದ ಮೇರೆಗೆ ಅದನ್ನು ಪ್ರಕಟಿಸಿದ ದಿನಾಂಕದಿಂದ ನಾಲ್ಕು ತಿಂಗಳುಗಳೊಳಗೆ, ಅದಕ್ಕೆ ತಿಳಿಸಿರಬಹುದಾದಂಥ ಆಕ್ಷೇಪಣೆಗಳೊಂದಿಗೆ ಅದರಲ್ಲಿ ಅದು ಮಾಡಿರಬಹುದಾದಂಥ ಯಾವುವೇ ಮಾರ್ಪಾಟುಗಳೊಂದಿಗೆ ಆ ಕರಡು ಕಾರ್ಯಯೋಜನೆಯನ್ನು ನಿರ್ದೇಶಕರ ಮೂಲಕ ರಾಜ್ಯ ಸರ್ಕಾರಕ್ಕೆ ಒಪ್ಪಿಸತಕ್ಕದ್ದು ಮತ್ತು ಅದೇ ಕಾಲದಲ್ಲಿ ಅದರ ಮಂಜೂರಾತಿಗಾಗಿ ಅರ್ಜಿಯನ್ನು ಸಲ್ಲಿಸತಕ್ಕದ್ದು.

(3) ಅಂಥ ಅರ್ಜಿಯನ್ನು ಸ್ವೀಕರಿಸಿದ ತರುವಾಯ ಮತ್ತು ಅದು ಸೂಕ್ತವೆಂದು ಯೋಚಿಸಬಹುದಾದಂಥ ವಿಚಾರಣೆಯನ್ನು ಮಾಡಿದ ತರುವಾಯ, ರಾಜ್ಯ ಸರ್ಕಾರವು ನಿರ್ದೇಶಕರೊಡನೆ ಸಮಾಲೋಚಿಸಿ, ಅದನ್ನು ಒಪ್ಪಿಸಿದ ದಿನಾಂಕದಿಂದ ಆರು ತಿಂಗಳುಗಳೊಳಗೆ, ಮಾರ್ಪಾಟುಗಳೊಂದಿಗೆ ಅಥವಾ ಮಾರ್ಪಾಟುಗಳಿಲ್ಲದೆ ಮತ್ತು ಅದು ವಿಧಿಸಲು ಸೂಕ್ತವೆಂದು ಯೋಚಿಸಬಹುದಾದಂಥ ಷರತ್ತುಗಳಿಗೊಳಪಟ್ಟು ಅಂಥ ಕಾರ್ಯಯೋಜನೆಗೆ ಅಧಿಸೂಚನೆಯ ಮೂಲಕ ಮಂಜೂರಾತಿ ನೀಡಬಹುದು ಅಥವಾ ಮಂಜೂರಾತಿಯನ್ನು ನಿರಾಕರಿಸಬಹುದು.

(4) ರಾಜ್ಯ ಸರ್ಕಾರವು ಅಂಥ ಕಾರ್ಯಯೋಜನೆಗೆ ಮಂಜೂರಾತಿ ನೀಡಿದರೆ, ಹಾಗೆ ಮಂಜೂರು ಮಾಡಿದ ಕರಡು ಕಾರ್ಯಯೋಜನೆಯು ಯಾವ ಸ್ಥಳದಲ್ಲಿ ಮತ್ತು ವೇಳೆಯಲ್ಲಿ ಸಾರ್ವಜನಿಕರ ಪರಿಶೀಲನೆಗೆ ಮುಕ್ತವಾಗಿರತಕ್ಕದ್ದೋ ಆ ಸ್ಥಳವನ್ನು ಮತ್ತು ವೇಳೆಯನ್ನು ಅಂಥ ಅಧಿಸೂಚನೆಯಲ್ಲಿ, ಅದು ಹೇಳತಕ್ಕದ್ದು.

**35. ಕಾರ್ಯಯೋಜನೆಯನ್ನು ಸಿದ್ಧಪಡಿಸಲು ಘೋಷಣೆಯನ್ನು ಮಾಡಿದ ತರುವಾಯ ನಿರ್ಬಂಧಗಳು:–** (1) 29ನೇ ಪ್ರಕರಣದ ಮೇರೆಗೆ ಕಾರ್ಯಯೋಜನೆಯನ್ನು ಸಿದ್ಧಪಡಿಸುವ ಉದ್ದೇಶದ ಬಗ್ಗೆ ಯೋಜನಾ ಪ್ರಾಧಿಕಾರದ ಘೋಷಣೆಯು ಅಥವಾ 31ನೇ ಪ್ರಕರಣದ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಅಧಿಸೂಚನೆಯು ಪ್ರಕಟವಾದ ದಿನಾಂಕದಂದು ಅಥವಾ ಆ ತರುವಾಯ,–

(ಎ) ಯಾರೇ ವ್ಯಕ್ತಿಯು, ಕಾರ್ಯಯೋಜನೆಯಲ್ಲಿ ಸೇರಿರುವ ಪ್ರದೇಶದೊಳಗೆ ನಿಯಮಿಸಿದ ನಮೂನೆಯಲ್ಲಿ ಯೋಜನಾ ಪ್ರಾಧಿಕಾರವು ಮಂಜೂರು ಮಾಡಿದ ಪ್ರಾರಂಭ ಪ್ರಮಾಣಪತ್ರದಲ್ಲಿ ಒಳಗೊಂಡಿರಬೇಕಾದಂಥ ಅವಶ್ಯಕ ಅನುಮತಿಗಾಗಿ ಅಂಥ ವ್ಯಕ್ತಿಯು ಅರ್ಜಿಯನ್ನು ಸಲ್ಲಿಸಿದ್ದ ಮತ್ತು ಅದನ್ನು ಪಡೆದುಕೊಂಡಿದ್ದ ಹೊರತು ಯಾವುದೇ ಕಟ್ಟಡವನ್ನು ನಿರ್ಮಿಸತಕ್ಕದ್ದಲ್ಲ ಅಥವಾ ಯಾವುದೇ ಕಟ್ಟಡ ಕಾಮಗಾರಿಯನ್ನು ಮುಂದುವರಿಸತಕ್ಕದ್ದಲ್ಲ ಅಥವಾ ಯಾವುದೇ ಕಟ್ಟಡವನ್ನು, ಕಟ್ಟಡದ ಭಾಗವನ್ನು, ಕಾಂಪೌಂಡು ಗೋಡೆಯನ್ನು ಅಥವಾ ಯಾವುದೇ ಚರಂಡಿ ಕಾಮಗಾರಿಯನ್ನು ತೆಗೆದುಹಾಕತಕ್ಕದ್ದಲ್ಲ, ಕೆಡವತಕ್ಕದ್ದಲ್ಲ, ಬದಲಾವಣೆ ಮಾಡತಕ್ಕದ್ದಲ್ಲ, ಅದಕ್ಕೆ ಸೇರ್ಪಡೆ ಮಾಡತಕ್ಕದ್ದಲ್ಲ, ಅಥವಾ ಅವುಗಳಿಗೆ ಯಾವುದೇ ಗಣನೀಯ ದುರಸ್ತಿಯನ್ನು ಮಾಡತಕ್ಕದ್ದಲ್ಲ ಅಥವಾ ಯಾವುದೇ ಮಣ್ಣನ್ನು, ಕಲ್ಲನ್ನು ಅಥವಾ ಸಾಮಗ್ರಿಯನ್ನು ಸ್ಥಳಾಂತರಿಸತಕ್ಕದ್ದಲ್ಲ ಅಥವಾ ಯಾವುದೇ ಭೂಮಿಯನ್ನು ಒಳವಿಭಾಗ ಮಾಡತಕ್ಕದ್ದಲ್ಲ ಅಥವಾ ಯಾವುದೇ ಭೂಮಿಯ ಅಥವಾ ಕಟ್ಟಡದ ಬಳಕೆದಾರನನ್ನು ಬದಲಾಯಿಸತಕ್ಕದ್ದಲ್ಲ.

(ಬಿ) ಯೋಜನಾ ಪ್ರಾಧಿಕಾರವು ಅಂಥ ಅರ್ಜಿಯನ್ನು ಸ್ವೀಕರಿಸಿದ ಮೇಲೆ, ಅದನ್ನು ಸ್ವೀಕರಿಸಿದ ಬಗ್ಗೆ ಕೂಡಲೇ ಅರ್ಜಿದಾರನಿಗೆ ಲಿಖಿತ ತಲುಪೊಪ್ಪಿಗೆಯನ್ನು ಒದಗಿಸತಕ್ಕದ್ದು ಮತ್ತು ವಿಚಾರಣೆಯನ್ನು ಮಾಡಿದ ತರುವಾಯ ಮತ್ತು ನಿರ್ದೇಶಕರೊಂದಿಗೆ ಸಮಾಲೋಚಿಸಿ ಅಂಥ ಪ್ರಮಾಣ ಪತ್ರವನ್ನು ಕೊಡಬಹುದು ಅಥವಾ ನಿರಾಕರಿಸಬಹುದು ಅಥವಾ ನಿರ್ದೇಶಕರ ಪೂರ್ವಾನುಮೋದನೆಯೊಂದಿಗೆ ಆ ಯೋಜನಾ ಪ್ರಾಧಿಕಾರವು ವಿಧಿಸಲು ಸೂಕ್ತವೆಂದು ಯೋಚಿಸಬಹುದಾದಂಥ ಷರತ್ತುಗಳಿಗೆ ಒಳಪಟ್ಟು, ಅದನ್ನು ಕೊಡಬಹುದು. ಯೋಜನಾ ಪ್ರಾಧಿಕಾರವು ಅಂಥ ತಲುಪೊಪ್ಪಿಗೆಯ ದಿನಾಂಕದಿಂದ ಮೂರು ತಿಂಗಳುಗಳೊಳಗೆ ಅರ್ಜಿದಾರನಿಗೆ ಯಾವುದೇ ತೀರ್ಮಾನವನ್ನು ತಿಳಿಸದಿದ್ದರೆ, ಆ ಅರ್ಜಿದಾರನಿಗೆ ಅಂಥ ಪ್ರಮಾಣಪತ್ರವನ್ನು ಕೊಟ್ಟಿರುವುದಾಗಿ ಭಾವಿಸತಕ್ಕದ್ದು.

(ಸಿ) ಯಾರೇ ವ್ಯಕ್ತಿಯು, (ಎ) ಖಂಡದಲ್ಲಿ ಅಥವಾ (ಬಿ) ಖಂಡದಲ್ಲಿ ಒಳಗೊಂಡಿರುವ ಉಪಬಂಧಗಳನ್ನು ಉಲ್ಲಂಘಿಸಿದರೆ, ಯೋಜನಾ ಪ್ರಾಧಿಕಾರವು, ಅಂಥ ವ್ಯಕ್ತಿಗೆ ಲಿಖಿತ ನೋಟೀಸಿನ ಮೂಲಕ ನಡೆಯುತ್ತಿರುವ ಯಾವುದೇ ಕಾಮಗಾರಿಯನ್ನು ನಿಲ್ಲಿಸಲು ನಿರ್ದೇಶಿಸಬಹುದು ಮತ್ತು ನಿಯಮಿಸಿದ ರೀತಿಯಲ್ಲಿ ವಿಚಾರಣೆಯನ್ನು ನಡೆಸಿದ ತರುವಾಯ ಯಾವುದೇ ಕಟ್ಟಡವನ್ನು ಅಥವಾ ಇತರ ಕಾಮಗಾರಿಯನ್ನು ತೆಗೆದು ಹಾಕಬಹುದು ಅಥವಾ ಕೆಡವಿ ಹಾಕಬಹುದು ಅಥವಾ ಅದರಲ್ಲಿ ಬದಲಾವಣೆ ಮಾಡಬಹುದು ಅಥವಾ ಯಾವ ಭೂಮಿಗೆ ಸಂಬಂಧಿಸಿದಂತೆ ಅಂಥ ಉಲ್ಲಂಘನೆಯನ್ನು ಮಾಡಲಾಗಿದೆಯೋ ಆ ಭೂಮಿಯನ್ನು ಅದರ ಮೂಲ ಸ್ಥಿತಿಗೆ ತರಬಹುದು.

(ಡಿ) ಖಂಡ – (ಸಿ) ಮೇರೆಗೆ ಯೋಜನಾ ಪ್ರಾಧಿಕಾರವು ವಹಿಸಿರುವ ಯಾವುವೇ ವೆಚ್ಚಗಳು, ಸಂದಾಯ ಮಾಡಲು ತಪ್ಪಿದ ವ್ಯಕ್ತಿಯಿಂದ ಅಥವಾ ಪ್ಲಾಟಿನ ಒಡೆಯನಿಂದ ಈ ಅಧಿನಿಯಮದ ಮೇರೆಗೆ ಅಂಥ ಪ್ರಾಧಿಕಾರಕ್ಕೆ ಬರಬೇಕಾದ ಬಾಕಿ ಮೊತ್ತವಾಗಿರತಕ್ಕದ್ದು.

(2) ಯಾರೇ ವ್ಯಕ್ತಿಯು, ಯೋಜನಾ ಪ್ರಾಧಿಕಾರವು 29ನೇ ಪ್ರಕರಣದ ಮೇರೆಗೆ ಕಾರ್ಯಯೋಜನೆಯನ್ನು ಸಿದ್ಧಪಡಿಸುವ ಉದ್ದೇಶದ ಘೋಷಣೆಯನ್ನು ಯಾವ ದಿನಾಂಕದಂದು ಪ್ರಕಟಿಸಲಾಯಿತೋ ಅಥವಾ ರಾಜ್ಯ ಸರ್ಕಾರವು 31ನೇ ಪ್ರಕರಣದ ಮೇರೆಗೆ ಅಧಿಸೂಚನೆಯನ್ನು ಯಾವ ದಿನಾಂಕದಂದು ಪ್ರಕಟಿಸಿತೋ ಆ ದಿನಾಂಕಕ್ಕೆ ಮುಂಚೆ ಪ್ರಾರಂಭಿಸಲಾದ ಕಟ್ಟಡದ ಅಥವಾ ಕಾಮಗಾರಿಯ ಅಥವಾ ಮಾಡಿಕೊಂಡ ಕರಾರಿನ ಮತ್ತು ಅಂಥ ಘೋಷಣೆಯ ಅಥವಾ ಅಧಿಸೂಚನೆಯ ಪ್ರಕಟಣೆಯ ಕಾಲದಲ್ಲಿ ಅಂಥ ಕಟ್ಟಡವು ಅಥವಾ ಕಾಮಗಾರಿಯು ಮುಂದುವರಿದಿರುವಷ್ಟರ ಮಟ್ಟಿಗೆ ಸಂಬಂಧಿಸಿದಂತೆ ಮಾತ್ರವೇ ಹೊರತು (1)ನೇ ಉಪಪ್ರಕರಣದ ಮೇರೆಗೆ ಯೋಜನಾ ಪ್ರಾಧಿಕಾರವು ಕೈಗೊಂಡ ಯಾವುದೇ ಕ್ರಮದಿಂದ ಉಂಟಾದ ಯಾವುದೇ ನಾಶಕ್ಕೆ, ನಷ್ಟಕ್ಕೆ ಅಥವಾ ಹಾನಿಗೆ ಸಂಬಂಧಿಸಿದಂತೆ ನಷ್ಟ ಪರಿಹಾರಕ್ಕೆ ಹಕ್ಕುಳ್ಳವನಾಗಿರತಕ್ಕದ್ದಲ್ಲ:

ಪರಂತು, ವಿನಾಯಿತಿಗೊಳಿಸಿದ ಪ್ರಕರಣಗಳಲ್ಲಿ ನಷ್ಟ ಪರಿಹಾರದ ಬಗೆಗಿನ ಅಂಥ ಕ್ಲೇಮು, ಅಂಥ ವ್ಯಕ್ತಿಯ ಮತ್ತು ಯೋಜನಾ ಪ್ರಾಧಿಕಾರದ ನಡುವೆ ಆಗಿರುವ ಯಾವುದೇ ಒಪ್ಪಂದದ ಷರತ್ತುಗಳಿಗೆ ಒಳಪಟ್ಟಿರತಕ್ಕದ್ದು.

(3) 26ನೇ ಪ್ರಕರಣದ (2)ನೇ ಉಪಪ್ರಕರಣದ (ಜೆ) ಖಂಡದ ಮೇರೆಗೆ ಅಥವಾ 32ನೇ ಪ್ರಕರಣದ ಮೇರೆಗಿನ ಕರಡು ಕಾರ್ಯಯೋಜನೆಯ ಮೇರೆಗೆ,–

(ಎ) ಯಾವ ಉದ್ದೇಶಕ್ಕಾಗಿ ಭೂಮಿಯ ಯಾವುದೇ ಪ್ಲಾಟನ್ನು ಬಳಸಬಾರದೋ ಆ ಉದ್ದೇಶವನ್ನು ನಿರ್ದಿಷ್ಟಪಡಿಸಿರುವಲ್ಲಿ, ಭೂಮಿಯ ಅಂಥ ಪ್ಲಾಟನ್ನು ಅಂತಿಮ ಕಾರ್ಯಯೋಜನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಒಂದು ವರ್ಷಕ್ಕಿಂತ ಕಡಿಮೆಯಲ್ಲದ ಅವಧಿಯೊಳಗೆ ಅಂಥ ಉದ್ದೇಶಕ್ಕಾಗಿ ಬಳಸುವುದು ನಿಂತು ಹೋಗತಕ್ಕದ್ದು ಮತ್ತು ಅದನ್ನು ಆ ಕಾರ್ಯಯೋಜನೆಯಲ್ಲಿ ನಿರ್ದಿಷ್ಟಪಡಿಸಿರುವ ಉದ್ದೇಶಗಳಿಗಾಗಿ ಮಾತ್ರವೇ ಅದನ್ನು ಬಳಸತಕ್ಕದ್ದು;

(ಬಿ) ಯಾವ ಉದ್ದೇಶಕ್ಕಾಗಿ ಈಗಿರುವ ಯಾವುದೇ ಕಟ್ಟಡವನ್ನು ಬಳಸಬಾರದೋ ಆ ಉದ್ದೇಶವನ್ನು, ನಿರ್ದಿಷ್ಟಪಡಿಸಿರುವಲ್ಲಿ, ಅಂಥ ಕಟ್ಟಡವನ್ನು ಆ ಕಾರ್ಯಯೋಜನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂತೆ, ಮೂರು ವರ್ಷಗಳಿಗಿಂತ ಕಡಿಮೆಯಲ್ಲದ ಅವಧಿಯೊಳಗೆ, ಆ ಕಾರ್ಯಯೋಜನೆಯಲ್ಲಿ ನಿರ್ದಿಷ್ಟಪಡಿಸಿದ ಉದ್ದೇಶವನ್ನು ಹೊರತುಪಡಿಸಿ ಇತರ ಉದ್ದೇಶಕ್ಕಾಗಿ ಬಳಸುವುದು ನಿಂತುಹೋಗತಕ್ಕದ್ದು;

(ಸಿ) ಯಾವ ಉದ್ದೇಶಕ್ಕಾಗಿ ಈಗಿರುವ ಕಟ್ಟಡಗಳೊಂದಿಗೆ ಭೂಮಿಯ ಯಾವುದೇ ಪ್ಲಾಟನ್ನು ಬಳಸಬಾರದೋ ಆ ಉದ್ದೇಶವನ್ನು ಆ ಕಾರ್ಯಯೋಜನೆಯಲ್ಲಿ ನಿರ್ದಿಷ್ಟಪಡಿಸಿರುವಲ್ಲಿ ಮತ್ತು ಅಂಥ ಕಟ್ಟಡಗಳ ಅಸ್ತಿತ್ವವು ಆ ಕಾರ್ಯಯೋಜನೆಯ ಉಪಬಂಧಗಳಿಗೆ ಅಸಂಗತವಾಗಿರುವಲ್ಲಿ ಅಂಥ ಕಟ್ಟಡಗಳು ಆ ಕಾರ್ಯಯೋಜನೆಯಲ್ಲಿ ನಿರ್ದಿಷ್ಟಪಡಿಸಿರಬಹುದಾದಂತೆ ಹತ್ತು ವರ್ಷಗಳಿಗಿಂತ ಕಡಿಮೆಯಲ್ಲದಂಥ ಅವಧಿಯೊಳಗೆ ಅಸ್ತಿತ್ವದಲ್ಲಿರುವುದು ನಿಂತು ಹೋಗತಕ್ಕದ್ದು:

ಪರಂತು, ಅಂಥ ಅವಧಿಯು ಆ ಕಟ್ಟಡದ ಸಮಂಜಸ ಬಾಳಿಕೆಯ ಅವಧಿಗಿಂತ ಕಡಿಮೆಯಾಗಿರತಕ್ಕದ್ದಲ್ಲ;

ಪಟ್ಟಣ ಯೋಜನಾ ಕಾರ್ಯಯೋಜನೆಯನ್ನು ಸಿದ್ಧಪಡಿಸುವುದರಿಂದ ಪ್ರತಿಕೂಲ ಪರಿಣಾಮಕ್ಕೆ ಒಳಗಾಗಿರುವ ಭೂಮಿಯ ಯಾವುದೇ ಪ್ಲಾಟಿಗೆ ಅಥವಾ ಕಟ್ಟಡಕ್ಕೆ ಯಾವುದೇ ನಷ್ಟ ಪರಿಹಾರವನ್ನು ಸಂದಾಯ ಮಾಡತಕ್ಕದ್ದಲ್ಲ.

(4) ಈ ಪ್ರಕರಣದ ಮೇರೆಗೆ ಯೋಜನಾ ಪ್ರಾಧಿಕಾರದ ತೀರ್ಮಾನದಿಂದ ಬಾಧಿತನಾದ ಯಾರೇ ವ್ಯಕ್ತಿಯು, ಆ ತೀರ್ಮಾನದ ದಿನಾಂಕದಿಂದ ಅರವತ್ತು ದಿವಸಗಳೊಳಗೆ, ನಿಯಮಿಸಿದ ಪ್ರಾಧಿಕಾರಕ್ಕೆ ಅಥವಾ ಯಾವುದೇ ಪ್ರಾಧಿಕಾರವನ್ನು ನಿಯಮಿಸಿಲ್ಲದಿದ್ದರೆ ರಾಜ್ಯ ಸರ್ಕಾರಕ್ಕೆ ಅಪೀಲನ್ನು ಮಾಡಿಕೊಳ್ಳಬಹುದು ಮತ್ತು ಆ ಅಪೀಲಿನಲ್ಲಿ ನಿಯಮಿಸಿದ ಅಂಥ ಪ್ರಾಧಿಕಾರದ ಅಥವಾ ರಾಜ್ಯ ಸರ್ಕಾರದ ಆದೇಶವು ಅಂತಿಮವಾಗಿರತಕ್ಕದ್ದು.

(5) ಉಪಪ್ರಕರಣ (1) ಮತ್ತು (2)ರ ಮೂಲಕ ವಿಧಿಸಿರುವ ನಿರ್ಬಂಧಗಳು, ರಾಜ್ಯ ಸರ್ಕಾರವು ಕರಡು ಕಾರ್ಯಯೋಜನೆಗೆ ಅಥವಾ ಅಂತಿಮ ಕಾರ್ಯಯೋಜನೆಗೆ ಮಂಜೂರಾತಿ ನೀಡಲು ನಿರಾಕರಿಸಿದ ಸಂದರ್ಭದಲ್ಲಿ ಜಾರಿಯಲ್ಲಿರುವುದು ನಿಂತುಹೋಗತಕ್ಕದ್ದು.

**36. ನಿಯಮ, ಉಪವಿಧಿ, ಇತ್ಯಾದಿಗಳನ್ನು ಅಮಾನತ್ತಿನಲ್ಲಿಡಲು ರಾಜ್ಯ ಸರ್ಕಾರದ ಅಧಿಕಾರ:–** (1) ಯೋಜನಾ ಪ್ರಾಧಿಕಾರವು, 29ನೇ ಪ್ರಕರಣದ ಮೇರೆಗೆ ಕಾರ್ಯಯೋಜನೆಯನ್ನು ರೂಪಿಸುವ ಉದ್ದೇಶದ ಬಗ್ಗೆ ಘೋಷಣೆಯನ್ನು ಪ್ರಕಟಿಸಿದಾಗ ಅಥವಾ ರಾಜ್ಯ ಸರ್ಕಾರವು 31ನೇ ಪ್ರಕರಣದ ಮೇರೆಗೆ ಅಧಿಸೂಚನೆಯನ್ನು ಪ್ರಕಟಿಸಿದಾಗ, ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ ರಾಜ್ಯ ವಿಧಾನ ಮಂಡಲದ ಯಾವುದೇ ಅಧಿನಿಯಮದ ಅಥವಾ ಯಾವ ಅಧಿನಿಯಮಗಳನ್ನು ರಾಜ್ಯ ವಿಧಾನಮಂಡಲವು ತಿದ್ದುಪಡಿ ಮಾಡಲು ಸಕ್ಷಮವಾಗಿರುವುದೋ ಆ ಯಾವುದೇ ಅಧಿನಿಯಮದ ಮೇರೆಗೆ ರಚಿಸಿದ ಅಥವಾ

ಹೊರಡಿಸಿದ ಯಾವುದೇ ನಿಯಮವನ್ನು, ಉಪವಿಧಿಯನ್ನು, ವಿನಿಯಮನವನ್ನು, ಅಧಿಸೂಚನೆಯನ್ನು ಅಥವಾ ಆದೇಶವನ್ನು, ಕಾರ್ಯಯೋಜನೆಯನ್ನು ಸರಿಯಾಗಿ ಕಾರ್ಯಗತಗೊಳಿಸುವುದಕ್ಕೆ ಅವಶ್ಯವಾಗಬಹುದಾದಷ್ಟರ ಮಟ್ಟಿಗೆ ಮಾತ್ರ ಅಮಾನತ್ತಿನಲ್ಲಿಡಬಹುದು.

(2) ಉಪಪ್ರಕರಣ (1)ರ ಮೇರೆಗೆ ಹೊರಡಿಸಿದ ಯಾವುದೇ ಆದೇಶವು, ರಾಜ್ಯ ಸರ್ಕಾರವು ಅಂತಿಮ ಕಾರ್ಯಯೋಜನೆಗೆ ಮಂಜೂರಾತಿ ನೀಡಲು ನಿರಾಕರಿಸಿದ ಸಂದರ್ಭದಲ್ಲಿ ಅಥವಾ ಅಂತಿಮ ಕಾರ್ಯಯೋಜನೆಯು ಜಾರಿಗೆ ಬರುವ ಸಂದರ್ಭದಲ್ಲಿ ಜಾರಿಯಲ್ಲಿರುವುದು ನಿಂತುಹೋಗತಕ್ಕದ್ದು.

## ಅಧ್ಯಾಯ - VI

## ಪಟ್ಟಣ ಯೋಜನಾ ಅಧಿಕಾರಿ ಮತ್ತು ಅವರ ಕರ್ತವ್ಯಗಳು

**37. ಪಟ್ಟಣ ಯೋಜನಾ ಅಧಿಕಾರಿಯ ನೇಮಕ:–** (1) 34ನೇ ಪ್ರಕರಣದ (3)ನೇ ಉಪಪ್ರಕರಣದ ಮೇರೆಗೆ ಕರಡು ಕಾರ್ಯಯೋಜನೆಗೆ ಮಂಜೂರಾತಿ ನೀಡುವ ಅಧಿಸೂಚನೆಯನ್ನು ಪ್ರಕಟಿಸಿದ ದಿನಾಂಕದಿಂದ ಒಂದು ತಿಂಗಳೊಳಗೆ ರಾಜ್ಯ ಸರ್ಕಾರವು ನಿಯಮಿಸಲಾದ ಅರ್ಹತೆಗಳನ್ನು ಹೊಂದಿರುವ ವ್ಯಕ್ತಿಯನ್ನು ಪಟ್ಟಣ ಯೋಜನಾ ಅಧಿಕಾರಿಯಾಗಿ ನೇಮಕ ಮಾಡತಕ್ಕದ್ದು. ಅವರ ಕರ್ತವ್ಯಗಳು ಇಲ್ಲಿ ಇನ್ನು ಮುಂದೆ ಉಪಬಂಧಿಸಿರುವಂತೆ ಇರತಕ್ಕದ್ದು.

(2) ಪಟ್ಟಣ ಯೋಜನಾ ಅಧಿಕಾರಿಯು ತನ್ನ ಕರ್ತವ್ಯಗಳನ್ನು ನಿರ್ವಹಿಸುವಲ್ಲಿ ನೆರವಾಗಲು ರಾಜ್ಯ ಸರ್ಕಾರವು ಅವಶ್ಯವೆಂದು ಭಾವಿಸುವಂಥ ಸಿಬ್ಬಂದಿಯನ್ನು ಒದಗಿಸತಕ್ಕದ್ದು.

(3) ಉಪಪ್ರಕರಣ (1)ರ ಮೇರೆಗೆ ನೇಮಕಗೊಂಡ ಪಟ್ಟಣ ಯೋಜನಾ ಅಧಿಕಾರಿಯು, ನಿರ್ದೇಶಕರಿಗೆ ಅಧೀನನಾಗಿರತಕ್ಕದ್ದು ಮತ್ತು ನಿರ್ದೇಶಕರ ಸಾಮಾನ್ಯ ನಿಯಂತ್ರಣಕ್ಕೆ ಮತ್ತು ಮೇಲ್ವಿಚಾರಣೆಗೆ ಒಳಪಟ್ಟು ಈ ಅಧಿನಿಯಮದ ಮೇರೆಗಿನ ತನ್ನ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

(4) ಉಪಪ್ರಕರಣ (1)ರ ಮೇರೆಗೆ ಪಟ್ಟಣ ಯೋಜನಾ ಅಧಿಕಾರಿಯಾಗಿ ನೇಮಕಗೊಂಡ ವ್ಯಕ್ತಿಯು ಆ ಪದವನ್ನು ಧಾರಣಮಾಡಿರುವುದು ನಿಂತು ಹೋದಾಗ ಮತ್ತು ಅವರ ಸ್ಥಾನದಲ್ಲಿ ಬೇರೊಬ್ಬ ವ್ಯಕ್ತಿಯು ನೇಮಕಗೊಂಡಾಗ, ಅಂಥ ಅಧಿಕಾರಿಯು, ಆ ಹುದ್ದೆಯಲ್ಲಿ ಧಾರಣ ಮಾಡಿರುವುದು ನಿಂತುಹೋದ ದಿನಾಂಕಕ್ಕಿಂತ ಮುಂಚೆ, ಅವರ ಮುಂದೆ ಇತ್ಯರ್ಥದಲ್ಲಿರುವ ಯಾವುವೇ ವ್ಯವಹರಣೆಗಳನ್ನು ಅವರ ಸ್ಥಾನದಲ್ಲಿ ನೇಮಕಗೊಂಡ ಹೊಸ ಪಟ್ಟಣ ಯೋಜನಾ ಅಧಿಕಾರಿಯು ಮುಂದುವರೆಸತಕ್ಕದ್ದು ಮತ್ತು ವಿಲೆ ಮಾಡತಕ್ಕದ್ದು.

**38. ಪಟ್ಟಣ ಯೋಜನಾ ಅಧಿಕಾರಿಯ ಕರ್ತವ್ಯಗಳು:–** (1) 37ನೇ ಪ್ರಕರಣದ (3)ನೇ ಉಪಪ್ರಕರಣದ ಉಪಬಂಧಗಳಿಗೆ ಒಳಪಟ್ಟು, ಪಟ್ಟಣ ಯೋಜನಾ ಅಧಿಕಾರಿಯು, ಈ ಅಧಿನಿಯಮದ ಉಪಬಂಧಗಳಿಗೆ ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳಿಗೆ ಅನುಸಾರವಾಗಿ,–

(ಎ) ಸಾರ್ವಜನಿಕ ಉದ್ದೇಶಕ್ಕಾಗಿ ಅಥವಾ ಯೋಜನಾ ಪ್ರಾಧಿಕಾರದ ಉದ್ದೇಶಕ್ಕಾಗಿ ಹಂಚಲಾದ ಅಥವಾ ಮೀಸಲಿಟ್ಟ ಪ್ರದೇಶಗಳನ್ನು ಮತ್ತು ಪುನರ್‌ರಚಿತ ಪ್ಲಾಟುಗಳನ್ನು ನಿರ್ದಿಷ್ಟಪಡಿಸತಕ್ಕದ್ದು ಮತ್ತು ಅವುಗಳ ಎಲ್ಲೆ ಗುರುತು ಮಾಡತಕ್ಕದ್ದು;

(ಬಿ) ಯಾವ ಸಂದರ್ಭದಲ್ಲಿ ಪುನರ್ ರಚಿತ ಪ್ಲಾಟನ್ನು, ಸಾಮಾನ್ಯ ಒಡೆತನ ಹೊಂದಿರುವ ವ್ಯಕ್ತಿಗಳಿಗೆ ಹಂಚಬೇಕಾಗಿದೆಯೋ ಆ ಸಂದರ್ಭದಲ್ಲಿ, ಅಂಥ ವ್ಯಕ್ತಿಗಳ ಪಾಲುಗಳನ್ನು ನಿರ್ಧರಿಸತಕ್ಕದ್ದು;

(ಸಿ) ಮೂಲ ಪ್ಲಾಟುಗಳ ಮೌಲ್ಯಗಳ ಒಟ್ಟು ಮೊತ್ತ ಮತ್ತು ಅಂತಿಮ ಕಾರ್ಯಯೋಜನೆಯಲ್ಲಿ ಸೇರಿಸಿದ ಪ್ಲಾಟುಗಳ ಮೌಲ್ಯಗಳ ಒಟ್ಟು ಮೊತ್ತ – ಇವೆರಡರ ನಡುವಣ ವ್ಯತ್ಯಾಸವನ್ನು ನಿಗದಿಪಡಿಸತಕ್ಕದ್ದು;

(ಡಿ) ಸಾರ್ವಜನಿಕ ಉದ್ದೇಶಕ್ಕಾಗಿ ಅಥವಾ ಯೋಜನಾ ಪ್ರಾಧಿಕಾರದ ಉದ್ದೇಶಕ್ಕಾಗಿ ಬಳಕೆ ಮಾಡಿದ, ಹಂಚಿದ ಅಥವಾ ಮೀಸಲಿಟ್ಟ ಪ್ರದೇಶಗಳು ಕಾರ್ಯಯೋಜನೆಯ ಪ್ರದೇಶದ ಒಳಗೆ ಇರುವ ಒಡೆಯರಿಗೆ ಅಥವಾ ನಿವಾಸಿಗಳಿಗೆ ಪೂರ್ಣವಾಗಿ ಅಥವಾ ಭಾಗಶಃ ಪ್ರಯೋಜನಕಾರಿಯಾಗಿವೆಯೇ ಎಂಬುದನ್ನು ನಿರ್ಧರಿಸತಕ್ಕದ್ದು;

(ಇ) ಯಾವ ಸಾರ್ವಜನಿಕ ಉದ್ದೇಶಕ್ಕೆ ಅಥವಾ ಯೋಜನಾ ಪ್ರಾಧಿಕಾರದ ಉದ್ದೇಶಕ್ಕೆ ಕಾರ್ಯಯೋಜನೆಯ ಪ್ರದೇಶದೊಳಗೆ ಇರುವ ಒಡೆಯರಿಗೆ ಅಥವಾ ನಿವಾಸಿಗಳಿಗೆ ಭಾಗಶಃ ಮತ್ತು ಸಾರ್ವಜನಿಕರಿಗೆ ಭಾಗಶಃ ಪ್ರಯೋಜನಕಾರಿಯಾಗಿರುವುದೋ, ಆ ಸಾರ್ವಜನಿಕ ಉದ್ದೇಶಕ್ಕಾಗಿ ಅಥವಾ ಯೋಜನಾ ಪ್ರಾಧಿಕಾರದ ಉದ್ದೇಶಕ್ಕಾಗಿ ಬಳಸಿದ, ಹಂಚಿದ ಅಥವಾ ಮೀಸಲಿಟ್ಟ ಪ್ರತಿಯೊಂದು ಪ್ಲಾಟಿಗೆ ನಷ್ಟಪರಿಹಾರವಾಗಿ ಸಂದಾಯ ಮಾಡಬೇಕಾದ ಮೊತ್ತಗಳ ಭಾಗವನ್ನು ಅಂದಾಜು ಮಾಡತಕ್ಕದ್ದು. ಅದನ್ನು ಕಾರ್ಯಯೋಜನೆಯ ಖರ್ಚುಗಳಲ್ಲಿ ಸೇರಿಸತಕ್ಕದ್ದು.

(ಎಫ್) ಕಾರ್ಯಯೋಜನೆಯ ಪ್ರದೇಶದೊಳಗಿರುವ ಒಡೆಯರಿಗೆ ಅಥವಾ ನಿವಾಸಿಗಳಿಗೆ ಭಾಗಶಃ ಮತ್ತು ಸಾರ್ವಜನಿಕರಿಗೆ ಭಾಗಶಃ ಪ್ರಯೋಜನಕಾರಿಯಾಗಿರುವ ಯಾವ ಪ್ಲಾಟನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಅಥವಾ ಯೋಜನಾ ಪ್ರಾಧಿಕಾರದ ಉದ್ದೇಶಕ್ಕಾಗಿ ಬಳಕೆ ಮಾಡಲಾಗಿದೆಯೋ ಅಥವಾ ಹಂಚಲಾಗಿದೆಯೋ ಅಥವಾ ಮೀಸಲಿಡಲಾಗಿದೆಯೋ ಆ ಪ್ರತಿಯೊಂದು ಪ್ಲಾಟಿಗೆ ವಿಧಿಸಬೇಕಾದ ವಂತಿಗೆಯನ್ನು ಲೆಕ್ಕ ಹಾಕತಕ್ಕದ್ದು;

(ಜಿ) ಧಾರ್ಮಿಕ ಅಥವಾ ಧರ್ಮಾರ್ಥ ಉದ್ದೇಶಗಳಿಗಾಗಿ ಅನನ್ಯ ಅಧಿಭೋಗದಲ್ಲಿರುವ ಪ್ಲಾಟುಗಳಿಗೆ ಸಂಬಂಧಿಸಿದಂತೆ ವಂತಿಗೆಯ ಸಂದಾಯಕ್ಕೆ ನೀಡಬಹುದಾದ ವಿನಾಯಿತಿ ಯಾವುದಾದರೂ ಇದ್ದರೆ ಆ ವಿನಾಯತಿಯ ಮೊಬಲಗನ್ನು ನಿರ್ಧರಿಸತಕ್ಕದ್ದು;

(ಹೆಚ್) ಅಂತಿಮ ಕಾರ್ಯಯೋಜನೆಯಲ್ಲಿ ಸೇರಿಸಿದ ಪ್ರತಿಯೊಂದು ಪ್ಲಾಟಿಗೆ ಸಂಬಂಧಿಸಿದಂತೆ ಪ್ರಾಪ್ತವಾಗುವ ಮೌಲ್ಯವೃದ್ಧಿಯನ್ನು ಅಂದಾಜು ಮಾಡತಕ್ಕದ್ದು;

(ಐ) ಅಂತಿಮ ಕಾರ್ಯಯೋಜನೆಯಲ್ಲಿ ಸೇರಿಸಿದ ಪ್ಲಾಟುಗಳ ಮೌಲ್ಯವೃದ್ಧಿಯಲ್ಲಿ ಯಾವ ಪ್ರಮಾಣವನ್ನು, ಕಾರ್ಯಯೋಜನೆಯ ಖರ್ಚುಗಳಿಗೆ ವಂತಿಗೆಯಾಗಿ ನೀಡಬೇಕಾಗುತ್ತದೋ ಆ ಪ್ರಮಾಣವನ್ನು ಲೆಕ್ಕ ಹಾಕತಕ್ಕದ್ದು;

(ಜೆ) ಅಂತಿಮ ಕಾರ್ಯಯೋಜನೆಯಲ್ಲಿ ಸೇರಿಸಿದ ಪ್ರತಿಯೊಂದು ಪ್ಲಾಟಿಗೆ ವಿಧಿಸಬೇಕಾದ ವಂತಿಗೆಯನ್ನು ಲೆಕ್ಕ ಹಾಕತಕ್ಕದ್ದು;

(ಕೆ) ವ್ಯಕ್ತಿಯಿಂದ ವಸೂಲು ಮಾಡಬಹುದಾದ ವಂತಿಗೆಯಿಂದ ಕಳೆಯಬೇಕಾದ ಅಥವಾ ಸಂದರ್ಭಾನುಸಾರ ಅದಕ್ಕೆ ಸೇರಿಸಬೇಕಾದ ಮೊಬಲಗನ್ನು ನಿರ್ಧರಿಸತಕ್ಕದ್ದು;

(ಎಲ್) ಮೂಲ ಪ್ಲಾಟಿನಲ್ಲಿನ ಯಾವುದೇ ಹಕ್ಕನ್ನು ಪುನರ್‌ರಚಿತ ಪ್ಲಾಟಿಗೆ ಪೂರ್ಣವಾಗಿ ಅಥವಾ ಭಾಗಶಃ ವರ್ಗಾವಣೆ ಮಾಡುವುದಕ್ಕಾಗಿ ವ್ಯವಸ್ಥೆ ಮಾಡತಕ್ಕದ್ದು ಅಥವಾ ಮೂಲ ಪ್ಲಾಟಿನಲ್ಲಿನ ಹಕ್ಕನ್ನು ಅಂತ್ಯಗೊಳಿಸುವುದಕ್ಕೆ ವ್ಯವಸ್ಥೆ ಮಾಡತಕ್ಕದ್ದು;

(ಎಂ) ಅವನ ಮುಂದೆ ಮಾಡಲಾಗಿರುವ ಕ್ಲೇಮುಗಳಿಗೆ ಸಂಬಂಧಿಸಿದಂತೆ, ಪಟ್ಟಣ ಯೋಜನಾ ಕಾರ್ಯಯೋಜನೆಯನ್ನು ರೂಪಿಸಿರುವುದರಿಂದ ಹಾನಿಕರ ಪರಿಣಾಮಕ್ಕೊಳಗಾಗಿರುವ ಹಕ್ಕುಗಳಿಗೆ ಸಂಬಂಧಪಟ್ಟಂತೆ ಯಾವುದೇ ಸ್ವತ್ತಿನ ಒಡೆಯನಿಗೆ ಸಂದಾಯ ಮಾಡಬೇಕಾದ ನಷ್ಟ ಪರಿಹಾರವನ್ನು ಅಂದಾಜು ಮಾಡತಕ್ಕದ್ದು;

(ಎನ್) 34ನೇ ಪ್ರಕರಣದ ಮೇರೆಗೆ ರಾಜ್ಯ ಸರ್ಕಾರವು ಮಂಜೂರು ಮಾಡಿದ ಕರಡು ಕಾರ್ಯಯೋಜನೆಗೆ ಅನುಸಾರವಾಗಿ ನಿಯಮಿಸಿದ ನಮೂನೆಯಲ್ಲಿ ಅಂತಿಮ ಕಾರ್ಯಯೋಜನೆಯನ್ನು ರೂಪಿಸತಕ್ಕದ್ದು:

ಪರಂತು, ಆ ಯೋಜನೆಯ ಖರ್ಚುಗಳಲ್ಲಿ ಶೇಕಡಾ ಹತ್ತರಷ್ಟು ಹೆಚ್ಚಳ ಅಥವಾ ಒಂದು ಲಕ್ಷ ರೂಪಾಯಿಗಳು ಇವುಗಳಲ್ಲಿ ಯಾವುದು ಕಡಿಮೆಯೋ ಅದನ್ನು ಒಳಗೊಳ್ಳುತ್ತದೆಂದು ಅವನು ಅಂದಾಜು ಮಾಡಿರುವ ಯಾವುದೇ ವ್ಯತ್ಯಾಸಕ್ಕೆ ರಾಜ್ಯ ಸರ್ಕಾರದ ಮಂಜೂರಾತಿಯು ಅಗತ್ಯವಾಗಿರತಕ್ಕದ್ದು ಎಂಬ ಷರತ್ತಿಗೊಳಪಟ್ಟು, ಮಂಜೂರಾದ ಆ ಕರಡು ಕಾರ್ಯಯೋಜನೆಯಲ್ಲಿ ಅವನು ಯಾವುದೇ ವ್ಯತ್ಯಾಸ ಮಾಡಬಹುದು:

ಮತ್ತೂ ಪರಂತು, ಪಟ್ಟಣ ಯೋಜನಾ ಅಧಿಕಾರಿಯು ಯೋಜನಾ ಪ್ರಾಧಿಕಾರದ ಸಮ್ಮತಿಯಿಲ್ಲದೆ ಮತ್ತು ಸಂಬಂಧಪಟ್ಟ ಒಡೆಯರು ಎತ್ತಬಹುದಾದಂಥ ಯಾವುವೇ ಆಕ್ಷೇಪಣೆಗಳ ಬಗ್ಗೆ ವಿಚಾರಣೆ ಮಾಡದೆ ಯಾವುದೇ ಗಣನೀಯ ವ್ಯತ್ಯಾಸವನ್ನು ಮಾಡತಕ್ಕದ್ದಲ್ಲ.

(2) ಪಟ್ಟಣ ಯೋಜನಾ ಅಧಿಕಾರಿಯು ಮಾಡಿರುವ ವ್ಯತ್ಯಾಸವು ಗಣನೀಯವಾಗಿದೆಯೇ ಅಥವಾ ಇಲ್ಲವೇ ಎಂಬ ಬಗ್ಗೆ ಪಟ್ಟಣ ಯೋಜನಾ ಅಧಿಕಾರಿಯ ಮತ್ತು ಯೋಜನಾ ಪ್ರಾಧಿಕಾರದ ನಡುವೆ ಯಾವುದೇ ಭಿನ್ನಾಭಿಪ್ರಾಯವಿದ್ದರೆ, ಯೋಜನಾ ಪ್ರಾಧಿಕಾರವು ಆ ವಿಷಯವನ್ನು ನಿರ್ದೇಶಕರ ಮೂಲಕ ರಾಜ್ಯ ಸರ್ಕಾರಕ್ಕೆ ಒಪ್ಪಿಸತಕ್ಕದ್ದು ಮತ್ತು ರಾಜ್ಯ ಸರ್ಕಾರದ ತೀರ್ಮಾನವು ಅಂತಿಮ ಮತ್ತು ನಿರ್ಣಾಯಕವಾಗಿರತಕ್ಕದ್ದು.

(3) ಯಾವುದೇ ಕರಡು ಕಾರ್ಯಯೋಜನೆಗೆ ನೇಮಕಗೊಂಡ ಪಟ್ಟಣ ಯೋಜನಾ ಅಧಿಕಾರಿಯು, (1)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಲಾಗಿರುವ ಎಲ್ಲಾ ವಿಷಯಗಳನ್ನು, ಅವನ ನೇಮಕದ ದಿನಾಂಕದಿಂದ ಹನ್ನೆರಡು ತಿಂಗಳುಗಳ ಅವಧಿಯೊಳಗೆ ತೀರ್ಮಾನಿಸತಕ್ಕದ್ದು:

ಪರಂತು, ರಾಜ್ಯ ಸರ್ಕಾರವು, ಕಾಲಕಾಲಕ್ಕೆ ಲಿಖಿತ ಆದೇಶದ ಮೂಲಕ ಸದರಿ ಅವಧಿಯನ್ನು ಆ ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಇನ್ನೂ ಹೆಚ್ಚಿನ ಅವಧಿಗೆ ವಿಸ್ತರಿಸಬಹುದು.

**39. ಪಟ್ಟಣ ಯೋಜನಾ ಅಧಿಕಾರಿಯ ಕೆಲವು ತೀರ್ಮಾನಗಳು ನಿರ್ದೇಶಕರಿಗೆ ಮಾಡಿಕೊಳ್ಳುವ ಅಪೀಲಿಗೆ ಒಳಪಟ್ಟು ಅಂತಿಮವಾಗಿರುವುದು:–** 38ನೇ ಪ್ರಕರಣದ (1)ನೇ ಉಪಪ್ರಕರಣದ (ಇ), (ಎಫ್), (ಎಚ್), (ಐ), (ಜೆ) ಮತ್ತು (ಎಂ) ಖಂಡಗಳಿಂದ ಉದ್ಭವಿಸದಿರುವ ವಿಷಯಗಳಲ್ಲಿ ಪಟ್ಟಣ ಯೋಜನಾ ಅಧಿಕಾರಿಯು ನೀಡಿದ ಪ್ರತಿಯೊಂದು ತೀರ್ಮಾನದ ಬಗ್ಗೆ, ಆ ತೀರ್ಮಾನದ ದಿನಾಂಕದಿಂದ ಒಂದು ತಿಂಗಳೊಳಗೆ ನಿರ್ದೇಶಕರಿಗೆ ಅಪೀಲು ಸಲ್ಲಿಸತಕ್ಕದ್ದು ಮತ್ತು ಅಂಥ ಅಪೀಲಿನಲ್ಲಿನ ಆದೇಶಗಳಿಗೊಳಪಟ್ಟು ಪಟ್ಟಣ ಯೋಜನಾ ಅಧಿಕಾರಿಯ ತೀರ್ಮಾನವು ಅಂತಿಮ ಮತ್ತು ನಿರ್ಣಾಯಕವಾಗಿರತಕ್ಕದ್ದು.

**40. ಅಪೀಲು:–** (1) 38ನೇ ಪ್ರಕರಣದ (1)ನೇ ಉಪಪ್ರಕರಣದ (ಇ), (ಎಫ್), (ಎಚ್), (ಜೆ) ಮತ್ತು (ಎಂ) ಖಂಡಗಳ ಮೇರೆಗೆ ಪಟ್ಟಣ ಯೋಜನಾ ಅಧಿಕಾರಿಯು ನೀಡಿದ ಯಾವುದೇ ತೀರ್ಮಾನವನ್ನು ಸಂಬಂಧಪಟ್ಟ ಪಕ್ಷಕಾರನಿಗೆ ಕೂಡಲೇ ತಿಳಿಸತಕ್ಕದ್ದು ಮತ್ತು ಹಾಗೆ ತಿಳಿಸಿದ ಆ ತೀರ್ಮಾನದಿಂದ ಬಾಧಿತನಾಗಿರುವ ಯಾರೇ ಪಕ್ಷಕಾರನು, ಯಾವ ಜಿಲ್ಲಾ ನ್ಯಾಯಾಧೀಶರ ಅಧಿಕಾರ ವ್ಯಾಪ್ತಿಯ ಸ್ಥಳೀಯ ಪರಿಮಿತಿಗಳೊಳಗೆ ಆ ಕಾರ್ಯಯೋಜನೆಯಲ್ಲಿ ಸೇರಿಸಲಾಗಿರುವ ಪ್ರದೇಶವು ಇರುವುದೋ ಆ ಜಿಲ್ಲಾ ನ್ಯಾಯಾಧೀಶರಿಗೆ ಅಪೀಲನ್ನು ಮಾಡಿಕೊಳ್ಳಬಹುದು.

(2) ಆ ಜಿಲ್ಲಾ ನ್ಯಾಯಾಧೀಶರು, ತನ್ನ ಮುಂದೆ ದಾಖಲ್ಮಾಡಿರುವ ಅಪೀಲನ್ನು ವಿಲೆಗಾಗಿ ಹೆಚ್ಚುವರಿ ಜಿಲ್ಲಾ ನ್ಯಾಯಾಧೀಶರಿಗೆ ವರ್ಗಾಯಿಸಬಹುದು.

(3) ಜಿಲ್ಲಾ ನ್ಯಾಯಾಧೀಶರು ಅಥವಾ ಸಂದರ್ಭಾನುಸಾರ ಹೆಚ್ಚುವರಿ ಜಿಲ್ಲಾ ನ್ಯಾಯಾಧೀಶರು, ತಾನು ಸೂಕ್ತವೆಂದು ಭಾವಿಸಬಹುದಾದಂಥ ವಿಚಾರಣೆಯನ್ನು ನಡೆಸಿದ ತರುವಾಯ, ಪಟ್ಟಣ ಯೋಜನಾ ಪ್ರಾಧಿಕಾರಿಯ ಪ್ರಸ್ತಾವಗಳನ್ನು ಆತನೇ ಪುನರ್ ಪರಿಶೀಲಿಸಲು ಪಟ್ಟಣ ಯೋಜನಾ ಅಧಿಕಾರಿಗೆ ನಿರ್ದೇಶಿಸಬಹುದು ಅಥವಾ ಪಟ್ಟಣ ಯೋಜನಾ ಅಧಿಕಾರಿಯ ಪ್ರಸ್ತಾವಗಳನ್ನು ಅಂಗೀಕರಿಸಬಹುದು, ಮಾರ್ಪಡಿಸಬಹುದು, ವ್ಯತ್ಯಸ್ಥಗೊಳಿಸಬಹುದು ಅಥವಾ ತಿರಸ್ಕರಿಸಬಹುದು, ಮತ್ತು 38ನೇ ಪ್ರಕರಣದ (1)ನೇ ಉಪಪ್ರಕರಣದ (ಇ), (ಎಫ್), (ಎಚ್), (ಐ), (ಜೆ) ಮತ್ತು (ಎಂ) ಖಂಡಗಳಿಂದ ಉದ್ಭವಿಸುವ ಎಲ್ಲಾ ವಿಷಯಗಳನ್ನು ತೀರ್ಮಾನಿಸತಕ್ಕದ್ದು.

(4) ಈ ಪ್ರಕರಣದ ಮೇರೆಗೆ ಅಪೀಲನ್ನು ವಿಚಾರಣೆ ಮಾಡುವ ಜಿಲ್ಲಾ ನ್ಯಾಯಾಧೀಶರು ಅಥವಾ ಹೆಚ್ಚುವರಿ ಜಿಲ್ಲಾ ನ್ಯಾಯಾಧೀಶರು ಆ ವಿಚಾರಣೆ ಕಾಲದಲ್ಲಿ ಹಾಜರಿರಬೇಕೆಂದು ಪಟ್ಟಣ ಯೋಜನಾ ಅಧಿಕಾರಿಯನ್ನು ಅಗತ್ಯಪಡಿಸಬಹುದು. ಹಾಗೆ ಅಗತ್ಯಪಡಿಸಿದಾಗ ಪಟ್ಟಣ ಯೋಜನಾ ಅಧಿಕಾರಿಯು ನ್ಯಾಯಾಧೀಶರ ಮುಂದೆ ನಡೆಯುವ ವ್ಯವಹರಣೆಗಳಲ್ಲಿ ಹಾಜರಿರತಕ್ಕದ್ದು ಮತ್ತು ಸಲಹಾ ರೂಪದಲ್ಲಿ ಆ ನ್ಯಾಯಾಧೀಶರಿಗೆ ನೆರವಾಗತಕ್ಕದ್ದು, ಆದರೆ ಸಾಕ್ಷ್ಯವನ್ನು ಕೊಡಲು ಅವರನ್ನು ಅಗತ್ಯಪಡಿಸತಕ್ಕದ್ದಲ್ಲ.

(5) ಉಪಪ್ರಕರಣ (3)ರ ಮೇರೆಗೆ ಜಿಲ್ಲಾ ನ್ಯಾಯಾಧೀಶರ ಅಥವಾ ಸಂದರ್ಭಾನುಸಾರ ಹೆಚ್ಚುವರಿ ಜಿಲ್ಲಾ ನ್ಯಾಯಧೀಶರ ತೀರ್ಮಾನವು ಅಂತಿಮ ಮತ್ತು ನಿರ್ಣಾಯಕವಾಗಿರತಕ್ಕದ್ದು ಮತ್ತು ಎಲ್ಲಾ ವ್ಯಕ್ತಿಗಳಿಗೆ ಬಂಧನಕಾರಿಯಾಗಿರತಕ್ಕದ್ದು. ಅಪೀಲಿನಲ್ಲಿ ಆದ ತೀರ್ಮಾನದ ಒಂದು ಪ್ರತಿಯನ್ನು ಪಟ್ಟಣ ಯೋಜನಾ ಅಧಿಕಾರಿಗೆ ಕಳುಹಿಸತಕ್ಕದ್ದು.

**41. ಯಾವುದೇ ಅಪೀಲನ್ನು ದಾಖಲ್ಮಾಡಿರದಿದ್ದರೆ ಪಟ್ಟಣ ಯೋಜನಾ ಅಧಿಕಾರಿಯ ತೀರ್ಮಾನವು ಅಂತಿಮವಾಗಿರತಕ್ಕದ್ದು ಮತ್ತು ಅಪೀಲಿನಲ್ಲಿ ಆದ ತೀರ್ಮಾನಕ್ಕನುಸಾರವಾಗಿ ಕಾರ್ಯಯೋಜನೆಯಲ್ಲಿ ವ್ಯತ್ಯಾಸಗೊಳಿಸುವುದು:–** (1) 40ನೇ ಪ್ರಕರಣದ ಮೇರೆಗೆ ಯಾವುದೇ ಅಪೀಲನ್ನು ಮಾಡಿರದಿರುವಲ್ಲಿ, 38ನೇ ಪ್ರಕರಣದ (1)ನೇ ಉಪಪ್ರಕರಣದ (ಇ), (ಎಫ್), (ಎಚ್), (ಐ), (ಜೆ) ಮತ್ತು (ಎಂ) ಖಂಡಗಳ ಮೇರೆಗಿನ ಆ ಪಟ್ಟಣ ಯೋಜನಾ ಅಧಿಕಾರಿಯ ತೀರ್ಮಾನವು ಅಂತಿಮ ಮತ್ತು ನಿರ್ಣಾಯಕವಾಗಿರತಕ್ಕದ್ದು.

(2) 40ನೇ ಪ್ರಕರಣದ ಮೇರೆಗೆ ಅಪೀಲನ್ನು ಮಾಡಿಕೊಂಡಿರುವಲ್ಲಿ ಮತ್ತು ಅಪೀಲಿನಲ್ಲಿ ಆದ ತೀರ್ಮಾನದ ಒಂದು ಪ್ರತಿಯನ್ನು ಪಟ್ಟಣ ಯೋಜನಾ ಅಧಿಕಾರಿಯು ಸ್ವೀಕರಿಸಿದಲ್ಲಿ, ಆ ಅಧಿಕಾರಿಯು, ಅವಶ್ಯವಾದರೆ, ಅಂಥ ತೀರ್ಮಾನಕ್ಕೆ ಅನುಸಾರವಾಗಿ ಆ ಕಾರ್ಯಯೋಜನೆಯಲ್ಲಿ ವ್ಯತ್ಯಾಸ ಮಾಡತಕ್ಕದ್ದು ಮತ್ತು 38ನೇ ಪ್ರಕರಣದ ಮೇರೆಗಿನ ತನ್ನ ತೀರ್ಮಾನದ ಒಂದು ಪ್ರತಿ ಮತ್ತು 40ನೇ ಪ್ರಕರಣದ ಮೇರೆಗಿನ ಅಪೀಲಿನಲ್ಲಿ ಆದ ತೀರ್ಮಾನದ

ಒಂದು ಪ್ರತಿ ಇವುಗಳೊಂದಿಗೆ ಆ ಅಂತಿಮ ಕಾರ್ಯಯೋಜನೆಯನ್ನು, ಆ ಅಂತಿಮ ಕಾರ್ಯಯೋಜನೆಗೆ ರಾಜ್ಯ ಸರ್ಕಾರದ ಮಂಜೂರಾತಿಯನ್ನು ಪಡೆದುಕೊಳ್ಳುವುದಕ್ಕಾಗಿ ನಿರ್ದೇಶಕರಿಗೆ ಕಳುಹಿಸತಕ್ಕದ್ದು.

## ಅಧ್ಯಾಯ - VII

## ವಿವಾದಿತ ಒಡೆತನ, ಪ್ರಾರಂಭಿಕ ಕಾರ್ಯಯೋಜನೆಗಳು ಮತ್ತು ಅಂತಿಮ ಕಾರ್ಯಯೋಜನೆ, ಅದರ ಮಂಜೂರಾತಿ ಮತ್ತು ಜಾರಿ

**42. ವಿವಾದಿತ ಒಡೆತನ:–** (1) ಯಾವ ಪ್ರದೇಶಕ್ಕೆ ಸಂಬಂಧಿಸಿದಂತೆ ಪಟ್ಟಣ ಯೋಜನಾ ಕಾರ್ಯ ಯೋಜನೆಯನ್ನು ರೂಪಿಸುವ ತನ್ನ ಉದ್ದೇಶವನ್ನು 29ನೇ ಪ್ರಕರಣದ ಮೇರೆಗೆ ಯೋಜನಾ ಪ್ರಾಧಿಕಾರವು ಘೋಷಿಸಿದೆಯೋ ಆ ಪ್ರದೇಶದಲ್ಲಿ ಸೇರಿಸಲಾದ ಆ ಭೂಮಿಯ ಯಾವುದೇ ತುಂಡಿನ ಒಡೆತನದ ಬಗ್ಗೆ ವಿವಾದಿತ ಕ್ಲೇಮು ಇರುವಲ್ಲಿ ಮತ್ತು ಅಂಥ ವಿವಾದಿತ ಕ್ಲೇಮಿಗೆ ಸಂಬಂಧಿಸಿದ ಹಕ್ಕು ದಾಖಲೆ ಅಥವಾ ಹಕ್ಕು ಬದಲಾವಣೆ ರಿಜಿಸ್ಟರಿನಲ್ಲಿರುವ ಯಾವುದೇ ನಮೂದು ಕರಾರುವಾಕ್ಕಾಗಿಲ್ಲದಿರುವಲ್ಲಿ ಅಥವಾ ನಿರ್ಣಾಯಕವಾಗಿಲ್ಲದಿರುವಲ್ಲಿ, ಯೋಜನಾ ಪ್ರಾಧಿಕಾರಿಯು ಅಥವಾ ಪಟ್ಟಣ ಯೋಜನಾ ಅಧಿಕಾರಿಯು ಅರ್ಜಿಯನ್ನು ಸಲ್ಲಿಸಿದ ಮೇಲೆ ಈ ಅಧಿನಿಯಮದ ಉದ್ದೇಶಗಳಿಗಾಗಿ ಯಾರು ಒಡೆಯನೆಂದು ಭಾವಿಸಬೇಕೆಂಬುದನ್ನು ತೀರ್ಮಾನಿಸುವ ಉದ್ದೇಶಕ್ಕಾಗಿ ರಾಜ್ಯ ಸರ್ಕಾರವು ನೇಮಕ ಮಾಡಬಹುದಾದಂಥ ಅಧಿಕಾರಿಯು, 38ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಯಾವ ದಿನಾಂಕಕ್ಕೆ ಮುಂಚೆ ಪಟ್ಟಣ ಯೋಜನಾ ಅಧಿಕಾರಿಯು ಅಂತಿಮ ಕಾರ್ಯಯೋಜನೆಯನ್ನು ರೂಪಿಸುವನೋ ಆ ದಿನಾಂಕಕ್ಕೆ ಮುಂಚೆ ಯಾವುದೇ ಕಾಲದಲ್ಲಿ ವಿಚಾರಣೆಯನ್ನು ನಡೆಸಬಹುದು.

(2) ಅಂಥ ತೀರ್ಮಾನವು ಅಪೀಲಿಗೆ ಒಳಪಟ್ಟಿರತಕ್ಕದ್ದಲ್ಲ, ಆದರೆ ಅದು ನಿಯತ ದಾವೆಗೆ ಪ್ರತಿಷೇಧವಾಗಿರತಕ್ಕದ್ದಲ್ಲ.

(3) ಸಿವಿಲ್ ನ್ಯಾಯಾಲಯವು ಅಂಥ ತೀರ್ಮಾನಕ್ಕೆ ಅಸಂಗತವಾಗಿರುವಂಥ ಡಿಕ್ರಿಯನ್ನು ಹೊರಡಿಸಿದ ಸಂದರ್ಭದಲ್ಲಿ, ಆ ಸಿವಿಲ್ ನ್ಯಾಯಾಲಯವಾಗಲಿ ಅಥವಾ ಅಂಥ ಡಿಕ್ರಿಯಿಂದ ಬಾಧಿತನಾದ ಬೇರೆ ವ್ಯಕ್ತಿಯಾಗಲಿ ಅಂಥ ಡಿಕ್ರಿಯನ್ನು ಆ ಯೋಜನಾ ಪ್ರಾಧಿಕಾರದ ಅಥವಾ ಪಟ್ಟಣ ಯೋಜನಾ ಅಧಿಕಾರಿಯ ಗಮನಕ್ಕೆ ತಂದ ತರುವಾಯ ಕಾರ್ಯಸಾಧ್ಯವಾದಷ್ಟು ಬೇಗನೆ ಅಂಥ ಡಿಕ್ರಿಗೆ ಅನುಸಾರವಾಗಿ ಆ ತೀರ್ಮಾನವನ್ನು ಸರಿಪಡಿಸತಕ್ಕದ್ದು, ಮಾರ್ಪಡಿಸತಕ್ಕದ್ದು ಅಥವಾ ರದ್ದುಪಡಿಸತಕ್ಕದ್ದು.

**43. ಪಟ್ಟಣ ಯೋಜನಾ ಅಧಿಕಾರಿಯು ಕೆಲವು ಸಂದರ್ಭಗಳಲ್ಲಿ ಪ್ರಾರಂಭಿಕ ಕಾರ್ಯಯೋಜನೆಯನ್ನು ತಯಾರಿಸುವುದು:–** 34ನೇ ಪ್ರಕರಣದ ಮೇರೆಗೆ ರಾಜ್ಯ ಸರ್ಕಾರವು ಮಂಜೂರು ಮಾಡಿದ ಕರಡು ಕಾರ್ಯಯೋಜನೆಯು ಈ ಕೆಳಕಂಡ ಯಾವುವೇ ಕಾಮಗಾರಿಗಳನ್ನು ಎಂದರೆ,–

(i) ಸೇತುವೆಗಳ ನಿರ್ಮಾಣ ಅಥವಾ ಬದಲಾವಣೆ;

(ii) ರಸ್ತೆಗಳು, ಬಯಲು ಸ್ಥಳಗಳು, ಉದ್ಯಾನವನಗಳು ಮತ್ತು ಮನರಂಜನಾ ಮೈದಾನಗಳು;

(iii) ಗ್ರಾಮಸಾರ ಚರಂಡಿ, ಭೂಮಿಯ ಮೇಲಿನ ಚರಂಡಿ, ಗ್ರಾಮಸಾರ ವಿಲೆ ಇವುಗಳನ್ನು ಒಳಗೊಂಡ ಚರಂಡಿ ;

(iv) ನೀರು ಸರಬರಾಜು;

(v) ಪಟ್ಟಣ ಯೋಜನಾ ಅಧಿಕಾರಿಯ ಅಭಿಪ್ರಾಯದಲ್ಲಿ ಸಾರ್ವಜನಿಕ ಉದ್ದೇಶಕ್ಕಾಗಿರುವಂಥ ಯಾವುದೇ ಇತರ ಕಾಮಗಾರಿ

– ಇವುಗಳನ್ನು ಒಳಗೊಂಡಿದ್ದರೆ, ಯೋಜನಾ ಪ್ರಾಧಿಕಾರಿಯು ಅರ್ಜಿಯನ್ನು ಸಲ್ಲಿಸಿದ ಮೇಲೆ ಪಟ್ಟಣ ಯೋಜನಾ ಅಧಿಕಾರಿಯು ಅಂಥ ಕಾರ್ಯಯೋಜನೆಗೆ ಸಂಬಂಧಿಸಿದಂತೆ 38ನೇ ಪ್ರಕರಣದ ಉಪಬಂಧಗಳಿಗೆ ಅನುಸಾರವಾಗಿ ನಿಯಮಿಸಿದ ರೀತಿಯಲ್ಲಿ ಪ್ರಾರಂಭಿಕ ಕಾರ್ಯಯೋಜನೆಯನ್ನು ತಯಾರಿಸತಕ್ಕದ್ದು:

ಪರಂತು, ಪಟ್ಟಣ ಯೋಜನಾ ಅಧಿಕಾರಿಯು ಈ ಹಂತದಲ್ಲಿ 38ನೇ ಪ್ರಕರಣದ (1)ನೇ ಉಪಪ್ರಕರಣದ (ಸಿ), (ಡಿ), (ಇ), (ಎಫ್), (ಜಿ), (ಹೆಚ್), (ಐ), (ಜೆ) (ಕೆ), (ಎಂ) ಮತ್ತು (ಎನ್) ಖಂಡಗಳಲ್ಲಿ ಉಲ್ಲೇಖಿಸಲಾದ ಅಧಿಕಾರಗಳನ್ನು ಚಲಾಯಿಸುವುದು ಅವಶ್ಯವಾಗಿರತಕ್ಕದ್ದಲ್ಲ.

**44. ಸೇತುವೆಗಳು, ರಸ್ತೆಗಳು, ಇತ್ಯಾದಿಗಳಿಗಾಗಿ ಅಗತ್ಯವಾದ ಭೂಮಿಯ ಸ್ವಾಧೀನವನ್ನು ವಹಿಸಿಕೊಡುವ ಅಧಿಕಾರ:–** (1) 43ನೇ ಪ್ರಕರಣದಲ್ಲಿ ಉಲ್ಲೇಖಿಸಲಾಗಿರುವ ಮತ್ತು ಪ್ರಾರಂಭಿಕ ಕಾರ್ಯಯೋಜನೆಯಲ್ಲಿ ಸೇರಿಸಲಾಗಿರುವ ಕಾಮಗಾರಿಗಳಲ್ಲಿ ಯಾವುದನ್ನಾದರೂ ಸಾರ್ವಜನಿಕ ಹಿತದೃಷ್ಟಿಯಿಂದ ತತ್‌ಕ್ಷಣ ಕೈಗೊಳ್ಳುವುದು ಅವಶ್ಯವೆಂದು ಯೋಜನಾ ಪ್ರಾಧಿಕಾರವು ಭಾವಿಸಿರುವಲ್ಲಿ, ಆ ಯೋಜನಾ ಪ್ರಾಧಿಕಾರವು ಪ್ರಾರಂಭಿಕ ಕಾರ್ಯಯೋಜನೆಯಲ್ಲಿ ತೋರಿಸಿದ ಭೂಮಿಯನ್ನು ಅದರಲ್ಲಿ ನಿಹಿತಗೊಳಿಸಲು ನಿರ್ದೇಶಕರ ಮೂಲಕ ರಾಜ್ಯ ಸರ್ಕಾರಕ್ಕೆ ಅರ್ಜಿಯನ್ನು ಸಲ್ಲಿಸತಕ್ಕದ್ದು.

(2) ಮೇಲೆ ಹೇಳಿದ ಯಾವುದೇ ಕಾಮಗಾರಿಯನ್ನಾದರೂ ನಿರ್ವಹಿಸುವ ಉದ್ದೇಶಕ್ಕಾಗಿ ಆ ಭೂಮಿಯ ಮೇಲೆ ಪ್ರವೇಶಿಸಲು ಆ ಯೋಜನಾ ಪ್ರಾಧಿಕಾರವನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಶಕ್ತಗೊಳಿಸುವ ಜರೂರು ಅವಶ್ಯಕತೆ ಇದೆ ಎಂದು ರಾಜ್ಯ ಸರ್ಕಾರಕ್ಕೆ ಮನದಟ್ಟಾದರೆ, ಅದು ಅಧಿಸೂಚನೆಯ ಮೂಲಕ ಆ ಭೂಮಿಯ ಸ್ವಾಧೀನವನ್ನು ತೆಗೆದುಕೊಳ್ಳಲು ಆ ಪಟ್ಟಣ ಯೋಜನಾ ಅಧಿಕಾರಿಗೆ ನಿರ್ದೇಶಿಸಬಹುದು ಮತ್ತು ಸದರಿ ಕಾಮಗಾರಿಗಳನ್ನು ಯಾವ ಅವಧಿಯಲ್ಲಿ ಪೂರ್ಣಗೊಳಿಸಬೇಕೋ ಆ ಅವಧಿಯನ್ನು ಸಹ ನಿಗದಿಪಡಿಸಬಹುದು:

ಪರಂತು, ಹಾಗೆ ನಿಗದಿಪಡಿಸಿದ ಅವಧಿಯನ್ನು ಸಾಕಷ್ಟು ಕಾರಣಗಳಿಗಾಗಿ ಕಾಲಕಾಲಕ್ಕೆ ವಿಸ್ತರಿಸಬಹುದು.

(3) ಪಟ್ಟಣ ಯೋಜನಾ ಅಧಿಕಾರಿಯು, ಆ ತರುವಾಯ ಭೂಮಿಯಲ್ಲಿ ಹಿತಾಸಕ್ತಿಯನ್ನು ಹೊಂದಿರುವ ವ್ಯಕ್ತಿಗೆ, ಅವನ ಭೂಮಿಯ ಸ್ವಾಧೀನವನ್ನು ಪಟ್ಟಣ ಯೋಜನಾ ಅಧಿಕಾರಿಗೆ ಅಥವಾ ಅವನು ಈ ಬಗ್ಗೆ ಅಧಿಕೃತಗೊಳಿಸಿದ ಯಾರೇ ವ್ಯಕ್ತಿಗೆ ನೋಟೀಸನ್ನು ಜಾರಿ ಮಾಡಿದ ದಿನಾಂಕದಿಂದ ಒಂದು ತಿಂಗಳ ಅವಧಿಯ ಒಳಗಾಗಿ ವಹಿಸಿಕೊಡಬೇಕೆಂದು ಅಗತ್ಯಪಡಿಸುವ ನೋಟೀಸನ್ನು ನಿಯಮಿಸಿದ ರೀತಿಯಲ್ಲಿ ಕೊಡತಕ್ಕದ್ದು ಮತ್ತು ಆ ನೋಟೀಸಿನಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ ಸ್ವಾಧೀನವನ್ನು ಒಪ್ಪಿಸದಿದ್ದರೆ, ಪಟ್ಟಣ ಯೋಜನಾ ಅಧಿಕಾರಿಯು ಭೂಮಿಯನ್ನು ಸ್ವಾಧೀನಕ್ಕೆ ತೆಗೆದುಕೊಳ್ಳತಕ್ಕದ್ದು ಮತ್ತು ಆ ಭೂಮಿಯನ್ನು ಯೋಜನಾ ಪ್ರಾಧಿಕಾರಿಗೆ ಒಪ್ಪಿಸತಕ್ಕದ್ದು. ಅಂಥ ಭೂಮಿಯು ಆ ಬಳಿಕ ಎಲ್ಲಾ ಪೂರ್ವಾಧಿಗಳಿಂದ ಮುಕ್ತವಾಗಿ ಯೋಜನಾ ಪ್ರಾಧಿಕಾರದಲ್ಲಿ ಸಂಪೂರ್ಣವಾಗಿ ನಿಹಿತವಾಗತಕ್ಕದ್ದು.

(4) ಉಪಪ್ರಕರಣ (3)ರ ಮೇರೆಗೆ ಭೂಮಿಯ ಸ್ವಾಧೀನವನ್ನು ತೆಗೆದುಕೊಳ್ಳುವಲ್ಲಿ ಪಟ್ಟಣ ಯೋಜನಾ ಅಧಿಕಾರಿಯನ್ನು ವಿರೋಧಿಸಿದರೆ ಅಥವಾ ಅವರಿಗೆ ಅಡಚಣೆಯನ್ನುಂಟು ಮಾಡಿದರೆ, ಅವರು ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಜಿಲ್ಲಾ ಮ್ಯಾಜಿಸ್ಟ್ರೇಟರನ್ನು ಅಥವಾ ಯಾರೇ ಮೊದಲನೇ ದರ್ಜೆ

ಮ್ಯಾಜಿಸ್ಟ್ರೇಟರನ್ನು ತನಗೆ ಆ ಭೂಮಿಯ ಸ್ವಾಧೀನತೆಯನ್ನು ಒಪ್ಪಿಸುವುದನ್ನು ಜಾರಿಗೊಳಿಸುವಂತೆ ಕೋರತಕ್ಕದು. ಅಂಥ ಮ್ಯಾಜಿಸ್ಟ್ರೇಟರು, ಆ ಪಟ್ಟಣ ಯೋಜನಾ ಅಧಿಕಾರಿಗೆ ಆ ಭೂಮಿಯ ಸ್ವಾಧೀನತೆಯನ್ನು ಒಪ್ಪಿಸುವುದನ್ನು ಸುನಿಶ್ಚಿತಗೊಳಿಸುವುದಕ್ಕಾಗಿ ಯುಕ್ತವಾಗಿ ಅವಶ್ಯವಾಗಬಹುದಾದಂಥ ಕ್ರಮಗಳನ್ನು ಕೈಗೊಳ್ಳತಕ್ಕದ್ದು ಅಥವಾ ಕೈಗೊಳ್ಳುವಂತೆ ಮಾಡತಕ್ಕದ್ದು ಮತ್ತು ಅಂಥ ಬಲವನ್ನು ಉಪಯೋಗಿಸತಕ್ಕದ್ದು ಅಥವಾ ಉಪಯೋಗಿಸುವಂತೆ ಮಾಡತಕ್ಕದ್ದು.

**ವಿವರಣೆ:–** ಈ ಉಪಪ್ರಕರಣದ ಮೇರೆಗೆ ಕ್ರಮಗಳನ್ನು ಕೈಗೊಳ್ಳುವ ಅಧಿಕಾರವು ಯಾವುದೇ ಭೂಮಿಯ ಅಥವಾ ಯಾವುದೇ ಬಗೆಯ ಇತರ ಸ್ವತ್ತಿನ ಮೇಲೆ ಪ್ರವೇಶಿಸುವ ಅಧಿಕಾರವನ್ನು ಒಳಗೊಂಡಿರತಕ್ಕದ್ದು.

(5) ಈ ಪ್ರಕರಣದ ಮೇರೆಗೆ ಯಾವ ಭೂಮಿಯ ಸ್ವಾಧೀನತೆಯನ್ನು ಆ ಪಟ್ಟಣ ಯೋಜನಾ ಅಧಿಕಾರಿಯು ತೆಗೆದುಕೊಂಡಿದ್ದಾರೆಯೋ ಆ ಭೂಮಿಯ ಒಡೆಯನು ಸದರಿ ಭೂಮಿಗೆ ಸಂಬಂಧಿಸಿದಂತೆ ಈ ಅಧಿನಿಯಮದ ಮೇರೆಗೆ ಸಂದಾಯವಾಗಬೇಕಾದ ನಷ್ಟ ಪರಿಹಾರದ ಮೊಬಲಗಿನ ಮೇಲೆ, ಯಾವ ದಿನಾಂಕದಂದು ಸ್ವಾಧೀನತೆಯನ್ನು ತೆಗೆದುಕೊಳ್ಳಲಾಗಿದೆಯೋ ಆ ದಿನಾಂಕದಿಂದ ಯಾವ ಅಂತಿಮ ಕಾರ್ಯಯೋಜನೆಯಲ್ಲಿ ಅಂಥ ಭೂಮಿಯನ್ನು ಸೇರಿಸಲಾಗಿದೆಯೋ ಅ ಅಂತಿಮ ಕಾರ್ಯಯೋಜನೆಯು ಜಾರಿಗೆ ಬರುವ ದಿನಾಂಕದವರೆಗೆ ಅಥವಾ ಸಂದರ್ಭಾನುಸಾರ (6)ನೇ ಉಪಪ್ರಕರಣದ ಮೇರೆಗೆ ಒಡೆಯನಿಗೆ ಆ ಭೂಮಿಯನ್ನು ವಾಪಸ್ಸು ಕೊಡುವವರೆಗೆ, ವಾರ್ಷಿಕವಾಗಿ ಶೇಕಡಾ 4ರ ದರದಲ್ಲಿ ಬಡ್ಡಿಗೆ ಹಕ್ಕುಳ್ಳವನಾಗಿರತಕ್ಕದ್ದು.

(6) ಆ ಯೋಜನಾ ಪ್ರಾಧಿಕಾರದಲ್ಲಿ ಯಾವ ಕಾಮಗಾರಿಗಳನ್ನು ನಿರ್ವಹಿಸಲು ಆ ಭೂಮಿಯನ್ನು (3)ನೇ ಉಪಪ್ರಕರಣದ ಮೇರೆಗೆ ನಿಹಿತಗೊಳಿಸಲಾಗಿತ್ತೋ ಆ ಯಾವುವೇ ಕಾಮಗಾರಿಗಳನ್ನು ಆ ಯೋಜನಾ ಪ್ರಾಧಿಕಾರವು (2)ನೇ ಉಪಪ್ರಕರಣದ ಮೇರೆಗೆ ನಿಗದಿಪಡಿಸಿದ ಅವಧಿಯೊಳಗೆ ನಿರ್ವಹಿಸದಿದ್ದರೆ, ಪಟ್ಟಣ ಯೋಜನಾ ಅಧಿಕಾರಿಯು, ಆ ಒಡೆಯನಿಗೆ ಅಥವಾ ಆ ಭೂಮಿಯಲ್ಲಿ ಹಿತಾಸಕ್ತಿಯನ್ನು ಹೊಂದಿರುವ ವ್ಯಕ್ತಿಗೆ ಆ ಭೂಮಿಗೆ ಉಂಟಾಗಿರುವ ಹಾನಿ ಯಾವುದಾದರೂ ಇದ್ದರೆ ಅದಕ್ಕಾಗಿ ಅವನು ಸೂಕ್ತವೆಂದು ಯೋಚಿಸಬಹುದಾದಂಥ ನಷ್ಟಪರಿಹಾರವನ್ನು ನಿರ್ಧರಿಸತಕ್ಕದ್ದು ಅಥವಾ ಪಾವತಿ ಮಾಡತಕ್ಕದ್ದು.

**45. ಅಂತಿಮ ಕಾರ್ಯಯೋಜನೆ:–** (1) 41ನೇ ಪ್ರಕರಣದ (2)ನೇ ಉಪಪ್ರಕರಣದ ಮೇರೆಗೆ ನಿರ್ದೇಶಕರಿಂದ ಆ ಅಂತಿಮ ಕಾರ್ಯಯೋಜನೆಯನ್ನು ಸ್ವೀಕರಿಸಿದ ದಿನಾಂಕದಿಂದ ಮೂರು ತಿಂಗಳುಗಳ ಅವಧಿಯೊಳಗಾಗಿ ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, ಆ ಕಾರ್ಯಯೋಜನೆಗೆ ಮಂಜೂರಾತಿ ನೀಡಬಹುದು ಅಥವಾ ಅಂಥ ಮಂಜೂರಾತಿ ನೀಡಲು ನಿರಾಕರಿಸಬಹುದು; ಪರಂತು, ಆ ಕಾರ್ಯಯೋಜನೆಯನ್ನು ಮಂಜೂರು ಮಾಡುವಲ್ಲಿ, ಯಾವುದೇ ತಪ್ಪನ್ನು, ಅಕ್ರಮವನ್ನು ಅಥವಾ ಅನೌಪಚಾರಿಕತೆಯನ್ನು ಸರಿಪಡಿಸುವ ಉದ್ದೇಶಗಳಿಗಾಗಿ ಅವಶ್ಯಕವಾಗಬಹುದಾದಂಥ ಮಾರ್ಪಾಟುಗಳನ್ನು ಮಾಡಬೇಕೆಂದು ರಾಜ್ಯ ಸರ್ಕಾರವು ಅಭಿಪ್ರಾಯಪಟ್ಟರೆ ಅದು ಹಾಗೆ ಮಾಡಬಹುದು.

(2) ರಾಜ್ಯ ಸರ್ಕಾರವು ಅಂಥ ಯೋಜನೆಗೆ ಮಂಜೂರಾತಿ ನೀಡಿದರೆ, ಅದು, ಆ ಅಧಿಸೂಚನೆಯಲ್ಲಿ,–

(ಎ) ಯಾವ ಸ್ಥಳದಲ್ಲಿ ಅಂತಿಮ ಕಾರ್ಯಯೋಜನೆಯನ್ನು ಸಾರ್ವಜನಿಕರ ಪರಿಶೀಲನೆಗಾಗಿ ಮುಕ್ತವಾಗಿ ಇಡಲಾಗಿದೆಯೋ ಆ ಸ್ಥಳ;

(ಬಿ) ಅದರ ಪ್ರತಿಗಳನ್ನು ಯಾವ ಬೆಲೆಗೆ ಪಡೆದುಕೊಳ್ಳಬಹುದೋ ಆ ಬೆಲೆ;

(ಸಿ) ಆ ಕಾರ್ಯಯೋಜನೆಯಿಂದ ಸೃಜಿಸಲಾಗಿರುವ ಎಲ್ಲಾ ಹೊಣೆಗಾರಿಕೆಗಳು ಯಾವ ದಿನಾಂಕದಂದು ಪರಿಣಾಮಕ್ಕೆ ಬರತಕ್ಕದ್ದೋ ಮತ್ತು ಆ ಅಂತಿಮ ಕಾರ್ಯಯೋಜನೆಯು ಜಾರಿಗೆ ಬರತಕ್ಕದ್ದೋ (ಆ ಅಧಿಸೂಚನೆಯನ್ನು ಪ್ರಕಟಿಸಿದ ದಿನಾಂಕದ ತರುವಾಯ ಒಂದು ತಿಂಗಳಿಗಿಂತ ಮುಂಚಿನದಲ್ಲದ) ಆ ದಿನಾಂಕ

– ಇವುಗಳನ್ನು ನಿರೂಪಿಸತಕ್ಕದ್ದು:

ಪರಂತು, ರಾಜ್ಯ ಸರ್ಕಾರವು ಕಾಲಕಾಲಕ್ಕೆ ಅಂಥ ದಿನಾಂಕವನ್ನು ಅದು ಸೂಕ್ತವೆಂದು ಯೋಚಿಸುವಂತೆ ಒಂದು ಬಾರಿಗೆ ಮೂರು ತಿಂಗಳುಗಳನ್ನು ಮೀರದ ಅವಧಿಗೆ ಮುಂದಕ್ಕೆ ಹಾಕಬಹುದು;

(3) ಅಂಥ ಅಧಿಸೂಚನೆಯಲ್ಲಿ ನಿಗದಿಪಡಿಸಿದ ದಿನಾಂಕದಂದು ಮತ್ತು ಆ ತರುವಾಯ ಪಟ್ಟಣ ಯೋಜನಾ ಕಾರ್ಯಯೋಜನೆಯು ಈ ಅಧಿನಿಯಮದಲ್ಲಿ ಅದನ್ನು ಅಧಿನಿಯಮಿತಿಗೊಳಿಸಿದ್ದರೆ ಹೇಗೋ ಹಾಗೆ ಪರಿಣಾಮವನ್ನು ಹೊಂದಿರತಕ್ಕದ್ದು.

**46. ಅಂತಿಮ ಕಾರ್ಯಯೋಜನೆಯ ಪರಿಣಾಮ:–** (1) ಅಂತಿಮ ಕಾರ್ಯಯೋಜನೆಯು ಯಾವ ದಿನದಂದು ಜಾರಿಗೆ ಬರುವುದೋ ಆ ದಿನದಂದು,–

(ಎ) ಯೋಜನಾ ಪ್ರಾಧಿಕಾರವು ಅಗತ್ಯಪಡಿಸಿದ ಎಲ್ಲಾ ಭೂಮಿಗಳು, ಅಂಥ ಕಾರ್ಯಯೋಜನೆಯಲ್ಲಿ ಅದನ್ನು ಅನ್ಯಥಾ ನಿರ್ಧರಿಸಿದ ಹೊರತು, ಎಲ್ಲಾ ಪೂರ್ವಾಧಿಗಳಿಂದ ಮುಕ್ತವಾಗಿ ಆ ಯೋಜನಾ ಪ್ರಾಧಿಕಾರದಲ್ಲಿ ಸಂಪೂರ್ಣವಾಗಿ ನಿಹಿತವಾಗತಕ್ಕದ್ದು;

(ಬಿ) ಪುನರ್‌ರಚಿಸಲಾಗಿರುವಂಥ ಮೂಲ ಪ್ಲಾಟುಗಳಲ್ಲಿನ ಎಲ್ಲಾ ಹಕ್ಕುಗಳು ಕೊನೆಗೊಳ್ಳತಕ್ಕದ್ದು ಮತ್ತು ಪುನರ್‌ರಚಿತ ಪ್ಲಾಟುಗಳು ಆ ಪಟ್ಟಣ ಯೋಜನಾ ಅಧಿಕಾರಿಯು ಇತ್ಯರ್ಥಗೊಳಿಸಿದ ಹಕ್ಕುಗಳಿಗೆ ಒಳಪಟ್ಟಿರತಕ್ಕದ್ದು.

(2) ಯಾವ ದಿನದಂದು ಮತ್ತು ಆ ತರುವಾಯ ಅಂತಿಮ ಕಾರ್ಯಯೋಜನೆಯು ಜಾರಿಗೆ ಬಂದಿರುವುದೋ ಆ ದಿನದಂದು ಮತ್ತು ಆ ತರುವಾಯ ಯಾವ ಭೂಮಿಯನ್ನು ಅಂತಿಮ ಕಾರ್ಯಯೋಜನೆಯ ಮೇರೆಗೆ ಅಧಿಭೋಗಿಸಲು ಅವನು ಹಕ್ಕುಳ್ಳವನಾಗಿಲ್ಲವೋ ಆ ಯಾವುದೇ ಭೂಮಿಯ ಅಧಿಭೋಗವನ್ನು ಮುಂದುವರಿಸುವ ಯಾರೇ ವ್ಯಕ್ತಿಯನ್ನು ಆ ಯೋಜನಾ ಪ್ರಾಧಿಕಾರವು ನಿಯಮಿಸಿದ ಪ್ರಕ್ರಿಯೆಗೆ ಅನುಸಾರವಾಗಿ ಕ್ಷಿಪ್ರವಾಗಿ ಹೊರಹಾಕಬಹುದು.

**47. ಕಾರ್ಯಯೋಜನೆಯನ್ನು ಜಾರಿಗೊಳಿಸುವ ಅಧಿಕಾರ:–** (1) ಯಾವ ದಿನದಂದು ಮತ್ತು ಆ ತರುವಾಯ ಅಂತಿಮ ಕಾರ್ಯಯೋಜನೆಯು ಜಾರಿಗೆ ಬಂದಿದೆಯೋ ಆ ದಿನದಂದು ಮತ್ತು ಆ ತರುವಾಯ ಯೋಜನಾ ಪ್ರಾಧಿಕಾರವು ನಿಯಮಿಸಿದ ನೋಟೀಸನ್ನು ಕೊಟ್ಟ ತರುವಾಯ ಮತ್ತು ಆ ಕಾರ್ಯಯೋಜನೆಯ ಉಪಬಂಧಗಳಿಗೆ ಅನುಸಾರವಾಗಿ,–

(ಎ) ಕಾರ್ಯಯೋಜನೆಯಲ್ಲಿ ಸೇರಿಸಲಾಗಿರುವ ಆ ಪ್ರದೇಶದಲ್ಲಿನ ಯಾವ ಕಟ್ಟಡವು ಅಥವಾ ಇತರ ಕಾಮಗಾರಿಯು ಆ ಕಾರ್ಯಯೋಜನೆಯನ್ನು ಉಲ್ಲಂಘಿಸಿರುವಂಥದ್ದಾಗಿದೆಯೋ ಅಥವಾ ಅದನ್ನು ನಿರ್ಮಾಣ ಮಾಡುವಾಗ ಅಥವಾ ನಿರ್ವಹಣೆ ಮಾಡುವಾಗ ಆ

ಕಾರ್ಯಯೋಜನೆಯ ಯಾವುದೇ ಉಪಬಂಧವನ್ನು ಅನುಸರಿಸಿಲ್ಲವೋ ಆ ಯಾವುದೇ ಕಟ್ಟಡವನ್ನು ಅಥವಾ ಇತರ ಕಾಮಗಾರಿಯನ್ನು ತೆಗೆದುಹಾಕಬಹುದು, ಕೆಡವಿ ಹಾಕಬಹುದು ಅಥವಾ ಅದರಲ್ಲಿ ಬದಲಾವಣೆ ಮಾಡಬಹುದು.

(ಬಿ) ಯಾವ ಕಾಮಗಾರಿಯ ನಿರ್ವಹಣೆಯಲ್ಲಿನ ವಿಳಂಬವು ಆ ಕಾರ್ಯಯೋಜನೆಯ ಪರಿಣಾಮಕಾರಿ ಕಾರ್ಯಾಚರಣೆಗೆ ಪ್ರತಿಕೂಲವಾಗುವುದೆಂದು ಯೋಜನಾ ಪ್ರಾಧಿಕಾರಿಗೆ ಕಂಡುಬರುವ ಯಾವುದೇ ಪ್ರಕರಣದಲ್ಲಿ, ಯಾವ ಕಾಮಗಾರಿಯನ್ನು ಕಾರ್ಯಯೋಜನೆಯ ಮೇರೆಗೆ ನಿರ್ವಹಿಸುವುದು ಯಾರೇ ವ್ಯಕ್ತಿಯ ಕರ್ತವ್ಯವಾಗಿದೆಯೋ ಆ ಯಾವುದೇ ಕಾಮಗಾರಿಯನ್ನು ನಿರ್ವಹಿಸಬಹುದು.

(2) ಈ ಪ್ರಕರಣದ ಮೇರೆಗೆ ಯೋಜನಾ ಪ್ರಾಧಿಕಾರವು ವಹಿಸಿರುವ ಎಲ್ಲಾ ವೆಚ್ಚಗಳನ್ನು ತಪ್ಪಿತ ವ್ಯಕ್ತಿಗಳಿಂದ ಅಥವಾ ಆ ಪ್ಲಾಟಿನ ಒಡೆಯನಿಂದ ಈ ಅಧಿನಿಯಮದ ಉಪಬಂಧಗಳ ಮೇರೆಗೆ ಯೋಜನಾ ಪ್ರಾಧಿಕಾರಕ್ಕೆ ಬಾಕಿಬರಬೇಕಾದ ಮೊತ್ತಗಳ ವಸೂಲಾತಿಗಾಗಿ ಉಪಬಂಧಿಸಿರುವ ರೀತಿಯಲ್ಲಿ ವಸೂಲು ಮಾಡಬಹುದು.

(3) ಯಾವುದೇ ಕಟ್ಟಡವು ಅಥವಾ ಕಾಮಗಾರಿಯು ಪಟ್ಟಣ ಯೋಜನಾ ಕಾರ್ಯಯೋಜನೆಯನ್ನು ಉಲ್ಲಂಘಿಸಿದೆಯೋ ಅಥವಾ ಯಾವುದೇ ಅಂಥ ಕಟ್ಟಡದ ನಿರ್ಮಾಣ ಅಥವಾ ಯಾವುದೇ ಅಂಥ ಕಟ್ಟಡದ ಅಥವಾ ಕಾಮಗಾರಿಯ ನಿರ್ವಹಣೆ ಮಾಡುವಾಗ ಪಟ್ಟಣ ಯೋಜನಾ ಕಾರ್ಯಯೋಜನೆಯ ಯಾವುದೇ ಉಪಬಂಧವನ್ನು ಪಾಲಿಸಿಲ್ಲವೇ ಎಂಬ ಬಗ್ಗೆ ಯಾವುದೇ ಪ್ರಶ್ನೆ ಉದ್ಭವಿಸಿದರೆ, ಅದನ್ನು ರಾಜ್ಯ ಸರ್ಕಾರಕ್ಕೆ ಅಥವಾ ಈ ಬಗ್ಗೆ ರಾಜ್ಯ ಸರ್ಕಾರವು ನಿರ್ದೇಶಕರನ್ನು ಅಧಿಕೃತಗೊಳಿಸಿದ್ದರೆ, ಅವರಿಗೆ ಉಲ್ಲೇಖಿಸತಕ್ಕದ್ದು, ಮತ್ತು ಸಂದರ್ಭಾನುಸಾರ ರಾಜ್ಯ ಸರ್ಕಾರದ ಅಥವಾ ಆ ನಿರ್ದೇಶಕರ ತೀರ್ಮಾನವು ಅಂತಿಮ ಮತ್ತು ನಿರ್ಣಾಯಕವಾಗಿರತಕ್ಕದ್ದು ಮತ್ತು ಎಲ್ಲಾ ವ್ಯಕ್ತಿಗಳ ಮೇಲೆ ಅದು ಬಂಧನಕಾರಿಯಾಗಿರತಕ್ಕದ್ದು.

**48. ತಪ್ಪು, ಅಕ್ರಮ ಅಥವಾ ಅನೌಪಚಾರಿಕತೆಯ ಕಾರಣದ ಮೇಲೆ ಕಾರ್ಯಯೋಜನೆಯಲ್ಲಿ ವ್ಯತ್ಯಾಸ ಮಾಡಲು ಅಧಿಕಾರ:–** (1) ಅಂತಿಮ ಕಾರ್ಯಯೋಜನೆಯು ಜಾರಿಗೆ ಬಂದ ತರುವಾಯ ಆ ಯೋಜನಾ ಪ್ರಾಧಿಕಾರವು ಕಾರ್ಯಯೋಜನೆಯು ತಪ್ಪು, ಅಕ್ರಮ ಅಥವಾ ಅನೌಪಚಾರಿಕತೆಯ ಕಾರಣದಿಂದಾಗಿ ದೋಷಪೂರ್ಣವಾಗಿದೆಯೆಂದು ಪರಿಗಣಿಸಿದರೆ, ಆ ಯೋಜನಾ ಪ್ರಾಧಿಕಾರವು ಆ ಕಾರ್ಯಯೋಜನೆಯಲ್ಲಿ ವ್ಯತ್ಯಾಸಗೊಳಿಸುವುದಕ್ಕೆ ನಿರ್ದೇಶಕರ ಮೂಲಕ ರಾಜ್ಯ ಸರ್ಕಾರಕ್ಕೆ ಲಿಖಿತದಲ್ಲಿ ಅರ್ಜಿಯನ್ನು ಸಲ್ಲಿಸಬಹುದು.

(2) ಅಂಥ ಅರ್ಜಿಯನ್ನು ಸ್ವೀಕರಿಸಿದ ಮೇಲೆ ಅಥವಾ ಅನ್ಯಥಾ, ಅಗತ್ಯಪಡಿಸಿದ ವ್ಯತ್ಯಾಸವು ಗಣನೀಯವಾಗಿಲ್ಲವೆಂದು, ರಾಜ್ಯ ಸರ್ಕಾರಕ್ಕೆ ಮನದಟ್ಟಾದರೆ, ರಾಜ್ಯ ಸರ್ಕಾರ ನಿಯಮಿಸಿದ ರೀತಿಯಲ್ಲಿ ಅಂಥ ವ್ಯತ್ಯಾಸದ ಕರಡನ್ನು ಪ್ರಕಟಿಸತಕ್ಕದ್ದು.

(3) ಉಪಪ್ರಕರಣ(2)ರ ಮೇರೆಗೆ ಪ್ರಕಟಿಸಲಾದ ಆ ಕರಡಿನಲ್ಲಿ ಮಾಡಿದ ವ್ಯತ್ಯಾಸವು ಆ ಕಾರ್ಯಯೋಜನೆಯಲ್ಲಿ ಮಾಡಬೇಕೆಂದು ಉದ್ದೇಶಿಸಿರುವ ಪ್ರತಿಯೊಂದು ತಿದ್ದುಪಡಿಯನ್ನು ನಿರೂಪಿಸತಕ್ಕದ್ದು, ಮತ್ತು ಯಾವುದೇ ಅಂಥ ತಿದ್ದುಪಡಿಯು 26ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಯಿಂದ (ಎಲ್) ವರೆಗಿನ ಯಾವುದೇ ಖಂಡದಲ್ಲಿ ನಿರ್ದಿಷ್ಟಪಡಿಸಿದ ವಿಷಯಕ್ಕೆ ಸಂಬಂಧಿಸಿದ್ದರೆ, ಆ ಕರಡಿನಲ್ಲಿ ಮಾಡಿದ ವ್ಯತ್ಯಾಸವು ನಿಯಮಿಸಬಹುದಾದಂಥ ಇತರ ವಿವರಗಳನ್ನು ಸಹ ಒಳಗೊಂಡಿರತಕ್ಕದ್ದು.

(4) ವ್ಯತ್ಯಾಸ ಮಾಡಿದಂಥ ಕರಡು ಆ ಯೋಜನಾ ಪ್ರಾಧಿಕಾರದ ಕಚೇರಿಯಲ್ಲಿ ಸಾರ್ವಜನಿಕರ ಪರಿಶೀಲನೆಗೆ ಮುಕ್ತವಾಗಿರತಕ್ಕದ್ದು.

(5) ವ್ಯತ್ಯಾಸ ಮಾಡಿದಂಥ ಕರಡನ್ನು ಪ್ರಕಟಿಸಿದ ದಿನಾಂಕದಿಂದ ಒಂದು ತಿಂಗಳೊಳಗೆ, ಅದರಿಂದ ಬಾಧಿತನಾದ ಯಾರೇ ವ್ಯಕ್ತಿಯು ಅಂಥ ವ್ಯತ್ಯಾಸಕ್ಕೆ ಅವನ ಆಕ್ಷೇಪಣೆಗಳನ್ನು ಲಿಖಿತದಲ್ಲಿ ನಿರ್ದೇಶಕನ ಮೂಲಕ ರಾಜ್ಯ ಸರ್ಕಾರಕ್ಕೆ ತಿಳಿಸಬಹುದು ಮತ್ತು ಅದರ ಒಂದು ಪ್ರತಿಯನ್ನು ಆ ಯೋಜನಾ ಪ್ರಾಧಿಕಾರಕ್ಕೆ ಕಳುಹಿಸಬಹುದು.

(6) (5)ನೇ ಉಪಪ್ರಕರಣದ ಮೇರೆಗೆ ಆಕ್ಷೇಪಣೆಗಳನ್ನು ಸ್ವೀಕರಿಸಿದ ತರುವಾಯ, ರಾಜ್ಯ ಸರ್ಕಾರವು ನಿರ್ದೇಶಕರು ಮತ್ತು ಆ ಯೋಜನಾ ಪ್ರಾಧಿಕಾರದೊಡನೆ, ಸಮಾಲೋಚಿಸಿದ ತರುವಾಯ ಮತ್ತು ಅದು ಸೂಕ್ತವೆಂದು ಯೋಚಿಸಬಹುದಾದಂಥ ವಿಚಾರಣೆಯನ್ನು ಮಾಡಿದ ತರುವಾಯ ಅಧಿಸೂಚನೆಯ ಮೂಲಕ ಆ ವ್ಯತ್ಯಾಸವನ್ನು ಮಾರ್ಪಾಟಿನೊಂದಿಗೆ ಅಥವಾ ಅದಿಲ್ಲದೆ ಅನುಮೋದಿಸಬಹುದು ಅಥವಾ ಆ ವ್ಯತ್ಯಾಸವನ್ನು ಮಾಡಲು ನಿರಾಕರಿಸಬಹುದು.

(7) ಮಾರ್ಪಾಟುಗಳೊಂದಿಗೆ ಅಥವಾ ಅದಿಲ್ಲದೆ ವ್ಯತ್ಯಾಸವನ್ನು ಮಾಡುವ ಆ ಅಧಿಸೂಚನೆಯ ದಿನಾಂಕದಿಂದ ಅಂಥ ವ್ಯತ್ಯಾಸವನ್ನು ಕಾರ್ಯಯೋಜನೆಯಲ್ಲಿ ಸೇರಿಸಿದ್ದಿದ್ದರೆ ಹೇಗೋ ಹಾಗೆ ಪರಿಣಾಮಕ್ಕೆ ಬರತಕ್ಕದ್ದು.

**49. ಪಟ್ಟಣ ಯೋಜನಾ ಕಾರ್ಯಯೋಜನೆಯನ್ನು ರದ್ದುಗೊಳಿಸಲು ಅಥವಾ ವ್ಯತ್ಯಾಸಗೊಳಿಸಲು ಅಧಿಕಾರ:–** (1) 48ನೇ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಪಟ್ಟಣ ಯೋಜನಾ ಕಾರ್ಯಯೋಜನೆಯನ್ನು ಈ ಅಧಿನಿಯಮಕ್ಕೆ ಅನುಸಾರವಾಗಿ ರೂಪಿಸಿದ, ಪ್ರಕಟಿಸಿದ ಮತ್ತು ಮಂಜೂರು ಮಾಡಿದ ತರುವಾಯದ ಕಾರ್ಯಯೋಜನೆಯ ಮೂಲಕ ಯಾವುದೇ ಕಾಲದಲ್ಲಿ ವ್ಯತ್ಯಾಸಗೊಳಿಸಬಹುದು ಅಥವಾ ರದ್ದುಗೊಳಿಸಬಹುದು.

(2) ರಾಜ್ಯ ಸರ್ಕಾರವು,–

(ಎ) ಯೋಜನಾ ಪ್ರಾಧಿಕಾರದ ಅರ್ಜಿಯ ಮೇಲೆ; ಅಥವಾ

(ಬಿ) ತಾನು ಸೂಕ್ತವೆಂದು ಭಾವಿಸಬಹುದಾದಂಥ ವಿಚಾರಣೆಯನ್ನು ಮಾಡಿದ ತರುವಾಯ ಮತ್ತು ಯೋಜನಾ ಪ್ರಾಧಿಕಾರಕ್ಕೆ ಅಹವಾಲನ್ನು ಹೇಳಿಕೊಳ್ಳಲು ಅವಕಾಶವನ್ನು ಕೊಟ್ಟ ತರುವಾಯ, ತಾನಾಗಿಯೇ

– ಪ್ರಕರಣದ ವಿಶೇಷ ಸಂದರ್ಭಗಳಲ್ಲಿ ಆ ಕಾರ್ಯಯೋಜನೆಯನ್ನು ರದ್ದುಗೊಳಿಸಬೇಕೆಂದು ಸರ್ಕಾರಕ್ಕೆ ಮನದಟ್ಟಾದರೆ, ನಿರ್ದೇಶಕರೊಂದಿಗೆ ಸಮಾಲೋಚಿಸಿದ ತರುವಾಯ ಅಧಿಸೂಚನೆಯ ಮೂಲಕ ಪಟ್ಟಣ ಯೋಜನಾ ಕಾರ್ಯಯೋಜನೆಯನ್ನು ಯಾವುದೇ ಕಾಲದಲ್ಲಿ ರದ್ದುಗೊಳಿಸಬಹುದು.

**50. ಅಂತಿಮ ಕಾರ್ಯಯೋಜನೆಯನ್ನು ವ್ಯತ್ಯಾಸಗೊಳಿಸಿದಾಗ ಅಥವಾ ರದ್ದುಗೊಳಿಸಿದಾಗ ನಷ್ಟ ಪರಿಹಾರ ಮತ್ತು ಖರ್ಚುಗಳನ್ನು ಹಂಚಿಕೊಳ್ಳುವುದು:–** (1) ಅಂತಿಮ ಕಾರ್ಯಯೋಜನೆಯು ಜಾರಿಗೆ ಬಂದಿರುವಂಥ ದಿವಸದ ತರುವಾಯ ಯಾವುದೇ ಕಾಲದಲ್ಲಿ ಅಂಥ ಕಾರ್ಯಯೋಜನೆಯನ್ನು ವ್ಯತ್ಯಾಸಗೊಳಿಸಿದರೆ ಅಥವಾ ರದ್ದುಗೊಳಿಸಿದರೆ ಅಂಥ ಕಾರ್ಯಯೋಜನೆಯನ್ನು ಪಾಲಿಸುವ ಉದ್ದೇಶಕ್ಕಾಗಿ ವೆಚ್ಚವನ್ನು ವಹಿಸಿರುವ ಯಾರೇ ವ್ಯಕ್ತಿಯು, ಅಂಥ ಕಾರ್ಯಯೋಜನೆಯನ್ನು ವ್ಯತ್ಯಾಸಗೊಳಿಸಿದ ಅಥವಾ ರದ್ದುಗೊಳಿಸಿದ ಕಾರಣದಿಂದಾಗಿ ಅಂಥ ಯಾವುದೇ ವೆಚ್ಚವು ನಿರರ್ಥಕವಾಗಿರುವಷ್ಟರಮಟ್ಟಿಗೆ ಯೋಜನಾ ಪ್ರಾಧಿಕಾರದಿಂದ ನಷ್ಟಪರಿಹಾರವನ್ನು ಪಡೆಯಲು ಹಕ್ಕುಳ್ಳವನಾಗಿರತಕ್ಕದ್ದು.

(2) ಅಂತಿಮ ಕಾರ್ಯಯೋಜನೆಗೆ ಮಂಜೂರಾತಿಯನ್ನು ರಾಜ್ಯ ಸರ್ಕಾರವು ನಿರಾಕರಿಸಿದ ಅಥವಾ ಅಂತಿಮ ಕಾರ್ಯಯೋಜನೆಯನ್ನು ರದ್ದುಗೊಳಿಸಿದ ಸಂದರ್ಭದಲ್ಲಿ, ಪ್ರತಿಯೊಂದು ಪ್ರಕರಣದಲ್ಲಿ ರಾಜ್ಯ ಸರ್ಕಾರವು ನಿರ್ಧರಿಸಬಹುದಾದಂಥ ಪ್ರಮಾಣದಲ್ಲಿ ಆ ಕಾರ್ಯಯೋಜನೆಯ ಆ ಖರ್ಚುಗಳನ್ನು ಯೋಜನಾ ಪ್ರಾಧಿಕಾರವು ಭರಿಸತಕ್ಕದ್ದು ಅಥವಾ ಸಂಬಂಧಪಟ್ಟ ಒಡೆಯರು ಯೋಜನಾ ಪ್ರಾಧಿಕಾರಕ್ಕೆ ಅವುಗಳನ್ನು ಸಂದಾಯ ಮಾಡತಕ್ಕದ್ದೆಂದು ರಾಜ್ಯ ಸರ್ಕಾರವು ನಿರ್ದೇಶಿಸಬಹುದು.

**51. ಜಂಟಿ ಪಟ್ಟಣ ಯೋಜನಾ ಕಾರ್ಯಯೋಜನೆಗಳು:–** (1) ಎರಡು ಅಥವಾ ಹೆಚ್ಚು ಯೋಜನಾ ಪ್ರಾಧಿಕಾರಗಳು, ಜಂಟಿ ಪಟ್ಟಣ ಯೋಜನಾ ಕಾರ್ಯಯೋಜನೆಯನ್ನು ರೂಪಿಸುವ ಮೂಲಕ ಅವುಗಳ ಸಂಬಂಧಪಟ್ಟ ಅಧಿಕಾರ ವ್ಯಾಪ್ತಿಯೊಳಗೆ ಇರುವ, ಹೊಂದಿಕೊಂಡಿರುವ ಪ್ರದೇಶಗಳ ಹಿತಾಸಕ್ತಿಗಳನ್ನು ಅತ್ಯುತ್ತಮವಾಗಿ ಈಡೇರಿಸಬಹುದೆಂದು ಅಭಿಪ್ರಾಯಪಟ್ಟಾಗ ಮತ್ತು ಅಂಥ ಅಭಿಪ್ರಾಯವನ್ನು ರಾಜ್ಯ ಸರ್ಕಾರವು ಒಪ್ಪಿಕೊಂಡರೆ ಒಂದು ಜಂಟಿ ಪಟ್ಟಣ ಯೋಜನಾ ಮಂಡಲಿಯನ್ನು ರಚಿಸತಕ್ಕದ್ದು.

(2) ಅಂಥ ಮಂಡಲಿಯು, ನಿಯಮಿಸಿದ ರೀತಿಯಲ್ಲಿ ಕ್ರಮಬದ್ಧವಾಗಿ ಚುನಾಯಿತರಾದ ಹಲವಾರು ಯೋಜನಾ ಪ್ರಾಧಿಕಾರಗಳ ಪೈಕಿ ಪ್ರತಿಯೊಂದು ಪ್ರಾಧಿಕಾರದ ಪ್ರತಿನಿಧಿಗಳನ್ನು ಮತ್ತು ರಾಜ್ಯ ಸರ್ಕಾರವು ನಾಮನಿರ್ದೇಶನ ಮಾಡಿದ ವ್ಯಕ್ತಿಗಳನ್ನು ಒಳಗೊಂಡಿರತಕ್ಕದ್ದು.

(3) ಅಂಥ ಮಂಡಲಿಯು, ಕ್ರಮಬದ್ಧವಾಗಿ ರಚಿತವಾದಾಗ, 29ನೇ ಪ್ರಕರಣದಲ್ಲಿ ಉಪಬಂಧಿಸಿರುವ ರೀತಿಯಲ್ಲಿ ಹೊಂದಿಕೊಂಡಿರುವ ಪ್ರದೇಶಗಳಿಗೆ ಸಂಬಂಧಿಸಿದಂತೆ ಜಂಟಿ ಪಟ್ಟಣ ಯೋಜನಾ ಕಾರ್ಯಯೋಜನೆಯನ್ನು ರೂಪಿಸುವ ಉದ್ದೇಶದ ಬಗ್ಗೆ ಒಂದು ಘೋಷಣೆಯನ್ನು ಮಾಡತಕ್ಕದ್ದು ಮತ್ತು ಆ ತರುವಾಯ ಮಂಡಲಿಯು ಈ ಅಧಿನಿಯಮದ ಮೇರೆಗಿನ ಎಲ್ಲಾ ಅಧಿಕಾರಗಳನ್ನು ಹೊಂದಿರತಕ್ಕದ್ದು ಮತ್ತು ಯೋಜನಾ ಪ್ರಾಧಿಕಾರದ ಕರ್ತವ್ಯಗಳಿಗೆ ಬದ್ಧರಾಗಿರತಕ್ಕದ್ದು ಮತ್ತು ಪ್ರಕ್ರಿಯೆಗೆ ಸಂಬಂಧಿಸಿದ ಎಲ್ಲಾ ಉಪಬಂಧಗಳು ಅನ್ವಯವಾಗಬಹುದಾದಷ್ಟರ ಮಟ್ಟಿಗೆ ಅನ್ವಯವಾಗತಕ್ಕದ್ದು.

(4) ಜಂಟಿ ಪಟ್ಟಣ ಯೋಜನೆಯ ಕಾರ್ಯಯೋಜನೆಯ ಕರಡು ಹೊಂದಿಕೊಂಡಿರುವ ಹಲವಾರು ಪ್ರದೇಶಗಳಲ್ಲಿ ಹಲವಾರು ಯೋಜನಾ ಪ್ರಾಧಿಕಾರಗಳು ನಿರ್ವಹಿಸಬೇಕಾದ ಕಾರ್ಯಯೋಜನೆಯ ಭಾಗಗಳನ್ನು ನಿರ್ದಿಷ್ಟಪಡಿಸತಕ್ಕದ್ದು ಮತ್ತು ಆ ಕಾರ್ಯಯೋಜನೆಯ ಹಲವಾರು ಭಾಗಗಳು ಅಂತಿಮ ಕಾರ್ಯಯೋಜನೆಯಲ್ಲಿ ಅಧಿಸೂಚಿತವಾದಾಗ ಅವುಗಳು ಪ್ರತ್ಯೇಕ ಕಾರ್ಯಯೋಜನೆಗಳಾಗಿದ್ದಿದ್ದರೆ ಹೇಗೋ ಹಾಗೆ ಹೊಂದಿಕೊಂಡಿರುವ ಹಲವಾರು ಪ್ರದೇಶಗಳಲ್ಲಿ ಜಾರಿಗೆ ಬರತಕ್ಕದ್ದು:

ಪರಂತು, ಜಂಟಿ ಪಟ್ಟಣ ಯೋಜನಾ ಕಾರ್ಯಯೋಜನೆಯ ಯಾವುದೇ ಭಾಗವನ್ನು ಎರಡು ಅಥವಾ ಹೆಚ್ಚು ಯೋಜನಾ ಪ್ರಾಧಿಕಾರಗಳು ಜಂಟಿಯಾಗಿ ಕಾರ್ಯಗತಗೊಳಿಸಬಹುದು.

**52. ಜಂಟಿ ಪಟ್ಟಣ ಯೋಜನಾ ಮಂಡಲಿಯ ಕೆಲವು ಅಧಿಕಾರಗಳ ಪ್ರತ್ಯಾಯೋಜನೆ:–** ಜಂಟಿ ಪಟ್ಟಣ ಯೋಜನಾ ಮಂಡಲಿಯು, ಲಿಖಿತ ಆದೇಶದ ಮೂಲಕ 35ನೇ ಪ್ರಕರಣದಿಂದ, 46ನೇ ಪ್ರಕರಣದ (2)ನೇ ಉಪಪ್ರಕರಣದಿಂದ ಮತ್ತು 47ನೇ ಪ್ರಕರಣದಿಂದ ಅದಕ್ಕೆ ಪ್ರದತ್ತವಾದ ಎಲ್ಲಾ ಅಥವಾ ಯಾವುವೇ ಅಧಿಕಾರಗಳನ್ನು ಆ ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಸಂದರ್ಭಗಳಲ್ಲಿ ಮತ್ತು ಅಂಥ ಷರತ್ತುಗಳು ಯಾವುವಾದರೂ ಇದ್ದರೆ, ಅವುಗಳ ಮೇರೆಗೆ, ಆ ಆದೇಶದಲ್ಲಿ ಪಟ್ಟಣ ಯೋಜನಾ ಮಂಡಲಿಯು ನಿರ್ದಿಷ್ಟಪಡಿಸಬಹುದಾದಂಥ ಅಧಿಕಾರಿಯು ಚಲಾಯಿಸತಕ್ಕದ್ದೆಂದು ನಿರ್ದೇಶಿಸಬಹುದು.

**53. ಮನ್ನಣೆ ಪಡೆದ ಏಜಂಟನ ಮೂಲಕ ಹಾಜರಾಗುವ ಹಕ್ಕು:–** ಪಟ್ಟಣ ಯೋಜನಾ ಅಧಿಕಾರಿಯ ಅಥವಾ 52ನೇ ಪ್ರಕರಣದ ಮೇರೆಗೆ ಯಾವ ಅಧಿಕಾರಿಗೆ ಜಂಟಿ ಪಟ್ಟಣ ಯೋಜನಾ ಮಂಡಲಿಯು ತನ್ನ ಅಧಿಕಾರಗಳನ್ನು ಪ್ರತ್ಯಾಯೋಜಿಸಿದೆಯೋ ಆ ಅಧಿಕಾರಿಯ ಮುಂದೆ ಇರುವ ಯಾವುದೇ ವ್ಯವಹರಣೆಯ ಪ್ರತಿಯೊಬ್ಬ ಪಕ್ಷಕಾರನು ಖುದ್ದಾಗಿಯೇ ಆಗಲಿ ಅಥವಾ ಮನ್ನಣೆ ಪಡೆದ ಏಜೆಂಟನ ಮೂಲಕವಾಗಿಯೇ ಆಗಲಿ ಹಾಜರಾಗಲು ಹಕ್ಕುಳ್ಳವನಾಗಿರತಕ್ಕದ್ದು.

**54. ಸಾಕ್ಷಿದಾರರು, ಮುಂತಾದವರ ಹಾಜರಾತಿಯನ್ನು ಒತ್ತಾಯಿಸುವ ಅಧಿಕಾರ:–** ಈ ಅಧಿನಿಯಮದ ಉದ್ದೇಶಗಳಿಗಾಗಿ, 42ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ನೇಮಕಗೊಂಡ ಅಧಿಕಾರಿಯು ಅಥವಾ ಪಟ್ಟಣ ಯೋಜನಾ ಅಧಿಕಾರಿಯು ಅಥವಾ 52ನೇ ಪ್ರಕರಣದ ಮೇರೆಗೆ ಜಂಟಿ ಪಟ್ಟಣ ಯೋಜನಾ ಮಂಡಲಿಯು ಯಾವ ತನ್ನ ಅಧಿಕಾರಗಳನ್ನು ಪ್ರತ್ಯಾಯೋಜಿಸಿದೆಯೋ ಆ ಅಧಿಕಾರಿಯು, ಹಿತಾಸಕ್ತಿಯನ್ನು ಹೊಂದಿರುವ ಪಕ್ಷಕಾರರನ್ನು ಅಥವಾ ಅವರ ಪೈಕಿ ಯಾರನ್ನಾದರೂ ಒಳಗೊಂಡಂತೆ ಸಾಕ್ಷಿದಾರರನ್ನು ಸಮನು ಮಾಡಬಹುದು ಮತ್ತು ಅವರ ಹಾಜರಾತಿಯನ್ನು ಒತ್ತಾಯಿಸಬಹುದು ಮತ್ತು ಸಿವಿಲ್ ಪ್ರಕ್ರಿಯಾ ಸಂಹಿತೆ, 1908ರ ಮೂಲಕ ಸಿವಿಲ್ ನ್ಯಾಯಾಲಯದ ಸಂದರ್ಭದಲ್ಲಿ ಉಪಬಂಧಿಸಿರುವಂಥ ಅವೇ ಸಾಧನಗಳ ಮೂಲಕ ಮತ್ತು ಸಾಧ್ಯವಾದಷ್ಟು ಮಟ್ಟಿಗೆ ಅದೇ ರೀತಿಯಲ್ಲಿ ಸಾಕ್ಷ್ಯ ನೀಡಲು ಅವರನ್ನು ಒತ್ತಾಯಿಸಬಹುದು ಮತ್ತು ದಸ್ತಾವೇಜುಗಳ ಹಾಜರಾತಿಯನ್ನು ಒತ್ತಾಯಿಸಬಹುದು.

**[1][XXX][1]**

1. 1964ರ ಅಧಿನಿಯಮ ಸಂ.14ರ ಮೂಲಕ 26-3-1964 ರಿಂದ ಜಾರಿಗೆ ಬರುವಂತೆ ಅಧ್ಯಾಯದ ಸಂಖ್ಯೆ ಮತ್ತು ಶೀರ್ಷಿಕೆಯನ್ನು ಬಿಟ್ಟುಬಿಡಲಾಗಿದೆ.

**55. ಕಾರ್ಯಯೋಜನೆಯ ಖರ್ಚುಗಳು:–** (1) ಪಟ್ಟಣ ಯೋಜನಾ ಕಾರ್ಯಯೋಜನೆಯ ಖರ್ಚುಗಳು,-

(ಎ) ಕಾರ್ಯಯೋಜನೆಯ ಖರ್ಚುಗಳಿಂದ ನಿರ್ದಿಷ್ಟವಾಗಿ ಹೊರತುಪಡಿಸಿಲ್ಲದಂಥ, ಈ ಅಧಿನಿಯಮದ ಉಪಬಂಧಗಳ ಮೇರೆಗೆ ಯೋಜನಾ ಪ್ರಾಧಿಕಾರವು ಸಂದಾಯ ಮಾಡಬೇಕಾದ ಎಲ್ಲಾ ಮೊತ್ತಗಳನ್ನು;

(ಬಿ) ಕಾರ್ಯಯೋಜನೆಯನ್ನು ರೂಪಿಸುವಲ್ಲಿ ಮತ್ತು ಅದನ್ನು ಜಾರಿಗೊಳಿಸುವಲ್ಲಿ ಯೋಜನಾ ಪ್ರಾಧಿಕಾರವು ಖರ್ಚು ಮಾಡಿದ ಅಥವಾ ಖರ್ಚು ಮಾಡಬೇಕೆಂದು ಅಂದಾಜು ಮಾಡಿದ ಎಲ್ಲಾ ಮೊತ್ತಗಳನ್ನು;

(ಸಿ) ಕಾರ್ಯಯೋಜನೆಯ ಪ್ರದೇಶದೊಳಗಿನ ಒಡೆಯರಿಗೆ ಅಥವಾ ನಿವಾಸಿಗಳಿಗೆ ಮಾತ್ರ ಪ್ರಯೋಜನಕಾರಿಯಾಗಿರುವಂಥ ಯಾವುದೇ ಸಾರ್ವಜನಿಕ ಉದ್ದೇಶಕ್ಕಾಗಿ ಅಥವಾ ಯೋಜನಾ ಪ್ರಾಧಿಕಾರದ ಉದ್ದೇಶಕ್ಕಾಗಿ ಮೀಸಲಿಟ್ಟ ಅಥವಾ ಗೊತ್ತುಪಡಿಸಿದ ಭೂಮಿಗೆ ನಷ್ಟ ಪರಿಹಾರವೆಂದು ಸಂದಾಯ ಮಾಡಬೇಕಾದ ಎಲ್ಲಾ ಮೊತ್ತಗಳನ್ನು;

(ಡಿ) ಅಂಥ ಮೀಸಲಿಟ್ಟಿದ್ದರಿಂದ ಅಥವಾ ಗೊತ್ತುಪಡಿಸುವಿಕೆಯಿಂದ ಕಾರ್ಯಯೋಜನೆಯ ಪ್ರದೇಶದೊಳಗಿನ ಒಡೆಯರಿಗೆ ಅಥವಾ ನಿವಾಸಿಗಳಿಗೆ ಪ್ರಾಪ್ತವಾಗುವ ಪ್ರಯೋಜನದ ಬಗ್ಗೆ ಹೇಳಬಹುದಾದಂತೆ, ಕಾರ್ಯಯೋಜನೆಯ ಪ್ರದೇಶದೊಳಗಿನ ಒಡೆಯರಿಗೆ ಅಥವಾ ನಿವಾಸಿಗಳಿಗೆ

ಭಾಗಶಃ ಮತ್ತು ಸಾರ್ವಜನಿಕರಿಗೆ ಭಾಗಶಃ ಪ್ರಯೋಜನಕಾರಿಯಾಗಿರುವಂಥ ಯಾವುದೇ ಸಾರ್ವಜನಿಕ ಉದ್ದೇಶಕ್ಕಾಗಿ ಅಥವಾ ಯೋಜನಾ ಪ್ರಾಧಿಕಾರದ ಉದ್ದೇಶಕ್ಕಾಗಿ ಮೀಸಲಿಟ್ಟ ಅಥವಾ ಗೊತ್ತುಪಡಿಸಿದ ಭೂಮಿಗೆ ನಷ್ಟ ಪರಿಹಾರವೆಂದು ಸಂದಾಯ ಮಾಡಬೇಕಾದ ಮೊತ್ತದ ಅಂಥ ಭಾಗವನ್ನು;

(ಇ) ಕಾರ್ಯಯೋಜನೆಯನ್ನು ರೂಪಿಸುವಲ್ಲಿ ಮತ್ತು ಅದನ್ನು ಜಾರಿಗೊಳಿಸುವಲ್ಲಿ ಯೋಜನಾ ಪ್ರಾಧಿಕಾರವು ವಹಿಸಿದ ಎಲ್ಲಾ ಕಾನೂನು ಸಮ್ಮತ ಖರ್ಚುಗಳನ್ನು;

(ಎಫ್) ಕಾರ್ಯಯೋಜನೆಯನ್ನು ರೂಪಿಸುವ ಉದ್ದೇಶದ ಬಗ್ಗೆ ಘೋಷಣೆಯನ್ನು ಮಾಡಿದ ದಿನಾಂಕದಂದು ಅದರ ಮೇಲಿನ ಎಲ್ಲಾ ಕಟ್ಟಡಗಳೊಂದಿಗೆ ಮತ್ತು ಕಾಮಗಾರಿಗಳೊಂದಿಗೆ ಮತ್ತು ಅದರ ಎಲ್ಲೆ ಗೆರೆಗಳನ್ನು ಬದಲಾವಣೆಗಳನ್ನು ಮಾಡುವುದರಿಂದ ಉಂಟಾದ ಮೇಲ್ಪಾಟುಗಳನ್ನು ಹೊರತುಪಡಿಸಿ, ಕಾರ್ಯಯೋಜನೆಯಲ್ಲಿ ಒಳಗೊಂಡ ಮೇಲ್ಪಾಟುಗಳಿಗೆ ಉಲ್ಲೇಖವನ್ನು ಮಾಡದೆ ಆ ದಿನಾಂಕದಂದು ಅಂಥ ಪ್ರತಿಯೊಂದು ಪ್ಲಾಟುಗಳನ್ನು ಅವುಗಳ ಮಾರುಕಟ್ಟೆ ಮೌಲ್ಯದಲ್ಲಿ ಅಂದಾಜು ಮಾಡಲಾಗಿದ್ದು, ಅಂತಿಮ ಕಾರ್ಯಯೋಜನೆಯಲ್ಲಿ ಒಳಗೊಂಡ ಮೂಲ ಪ್ಲಾಟುಗಳ ಒಟ್ಟು ಮೌಲ್ಯವು, ಪ್ಲಾಟುಗಳ ಒಟ್ಟು ಮೌಲ್ಯಗಳನ್ನು ಮೀರುವಂಥ ಯಾವುದೇ ಮೊಬಲಗನ್ನು

– ಒಳಗೊಳ್ಳತಕ್ಕದ್ದು.

(2) ಯಾವುದೇ ಪ್ರಕರಣದಲ್ಲಿ, ಅಂಥ ಪ್ರತಿಯೊಂದು ಪ್ಲಾಟನ್ನು (1)ನೇ ಉಪಪ್ರಕರಣದ (ಎಫ್) ಖಂಡದಲ್ಲಿ ಉಪಬಂಧಿಸಿರುವ ರೀತಿಯಲ್ಲಿ ಅಂದಾಜು ಮಾಡಲಾಗಿದ್ದು, ಅಂತಿಮ ಕಾರ್ಯಯೋಜನೆಯಲ್ಲಿ ಒಳಗೊಂಡ ಪ್ಲಾಟುಗಳ ಒಟ್ಟು ಮೌಲ್ಯಗಳು, ಮೂಲ ಪ್ಲಾಟುಗಳ ಒಟ್ಟು ಮೌಲ್ಯಗಳನ್ನು ಮೀರಿದರೆ, ಆಗ ಅಂಥ ಹೆಚ್ಚಿನ ಮೊಬಲಗನ್ನು, (1)ನೇ ಉಪಪ್ರಕರಣದಲ್ಲಿ ಪರಿಭಾಷಿಸಿರುವಂತೆ ಕಾರ್ಯಯೋಜನೆಯ ಖರ್ಚುಗಳನ್ನು ಲೆಕ್ಕ ಹಾಕುವಾಗ ಕಳೆಯತಕ್ಕದ್ದು.

**56. ಮೌಲ್ಯವೃದ್ಧಿಯನ್ನು ಲೆಕ್ಕ ಹಾಕುವುದು:–** ಈ ಅಧಿನಿಯಮದ ಉದ್ದೇಶಗಳಿಗಾಗಿ, ಮೌಲ್ಯವೃದ್ಧಿಯು, ಕಾರ್ಯಯೋಜನೆಯನ್ನು ರೂಪಿಸುವ ಉದ್ದೇಶದ ಬಗೆಗಿನ ಘೋಷಣೆಯ ದಿನಾಂಕದಂದು ಯಾವ ಮೊಬಲಗು ಆ ಕಾರ್ಯಯೋಜನೆಯು ಮುಕ್ತಾಯಗೊಂಡಿದೆ ಎಂಬ ಭಾವನೆಯ ಮೇಲೆ ಅಂದಾಜು ಮಾಡಿದ ಅಂತಿಮ ಕಾರ್ಯಯೋಜನೆಯಲ್ಲಿ ಒಳಗೊಂಡ ಪ್ಲಾಟಿನ ಮಾರುಕಟ್ಟೆ ಮೌಲ್ಯವು ಆ ಕಾರ್ಯಯೋಜನೆಯಲ್ಲಿ ಒಳಗೊಂಡ ಮೇಲ್ಪಾಟುಗಳಿಗೆ ಉಲ್ಲೇಖ ಮಾಡದೆ, ಅಂದಾಜು ಮಾಡಿದ ಅದೇ ಪ್ಲಾಟಿನ ಮಾರುಕಟ್ಟೆ ಮೌಲ್ಯವನ್ನು ಅದೇ ದಿನಾಂಕದಂದು ಮೀರುವುದೋ ಆ ಮೊಬಲಗು ಆಗಿರುವುದಾಗಿ ಭಾವಿಸತಕ್ಕದ್ದು:

ಪರಂತು, ಅಂಥ ಮೌಲ್ಯಗಳನ್ನು ಅಂದಾಜು ಮಾಡುವಲ್ಲಿ, ಅಂಥ ಪ್ಲಾಟಿನ ಮೇಲೆ ನಿರ್ಮಿಸಿದ ಕಟ್ಟಡಗಳ ಅಥವಾ ಇತರ ಕಾಮಗಾರಿಗಳ ಅಥವಾ ನಿರ್ಮಾಣದ ಕ್ರಮದಲ್ಲಿ ಅಂಥ ಮೌಲ್ಯವೃದ್ಧಿಯನ್ನು ಪರಿಗಣನೆಗೆ ತೆಗೆದುಕೊಳ್ಳತಕ್ಕದ್ದಲ್ಲ.

**57. ಕಾರ್ಯಯೋಜನೆಯ ಖರ್ಚುಗಳ ಬಗ್ಗೆ ವಂತಿಗೆ:–** (1) ಕಾರ್ಯಯೋಜನೆಯ ಖರ್ಚುಗಳನ್ನು ಪಟ್ಟಣ ಯೋಜನಾ ಅಧಿಕಾರಿಯು ಅಂಥ ಪ್ಲಾಟಿಗೆ ಸಂಬಂಧಿಸಿದಂತೆ ಪ್ರಾಪ್ತವಾಗುವುದೆಂದು ಅಂದಾಜು ಮಾಡಿರುವಂಥ ಮೌಲ್ಯವೃದ್ಧಿಗೆ ಪ್ರಮಾಣಾನುಸಾರವಾಗಿ ಲೆಕ್ಕ ಹಾಕಿದ, ಅಂತಿಮ ಕಾರ್ಯಯೋಜನೆಯಲ್ಲಿ ಸೇರಿಸಿದ ಪ್ರತಿಯೊಂದು ಪ್ಲಾಟಿನ ಮೇಲೆ ಯೋಜನಾ ಪ್ರಾಧಿಕಾರವು ಸಂಗ್ರಹಿಸುವ ವಂತಿಗೆಯ ಮೂಲಕ, ಪೂರ್ಣವಾಗಿ ಅಥವಾ ಭಾಗಶಃ ಭರಿಸತಕ್ಕದ್ದು:

ಪರಂತು,–

(ಎ) ಅಂಥ ಯಾವುದೇ ವಂತಿಗೆಯು ಅಂಥ ಪ್ಲಾಟಿಗೆ ಸಂಬಂಧಿಸಿದಂತೆ ಪ್ರಾಪ್ತವಾಗುವ ಪಟ್ಟಣ ಯೋಜನಾಧಿಕಾರಿಯು ಅಂದಾಜು ಮಾಡಿದ ಮೌಲ್ಯವೃದ್ಧಿಯ ಮೂರನೇ ಒಂದರಷ್ಟನ್ನು ಮೀರತಕ್ಕದ್ದಲ್ಲ;

(ಬಿ) ಸ್ವಾಧೀನ ಸಹಿತ ಅಡಮಾನಕ್ಕೆ ಅಥವಾ ಗುತ್ತಿಗೆಗೆ ಪ್ಲಾಟು ಒಳಪಟ್ಟಿರುವಲ್ಲಿ, ಆ ಪಟ್ಟಣ ಯೋಜನಾ ಅಧಿಕಾರಿಯು ಅಡಮಾನ ಪಡೆದವನು ಅಥವಾ ಗುತ್ತಿಗೆ ಪಡೆದವನು ಮತ್ತು ಅಡಮಾನಕ್ಕೆ ಕೊಟ್ಟವನು, ಅಥವಾ ಗುತ್ತಿಗೆ ಕೊಟ್ಟವನು ಅಂಥ ವಂತಿಗೆಯನ್ನು ಯಾವ ಪ್ರಮಾಣದಲ್ಲಿ ಸಂದಾಯ ಮಾಡತಕ್ಕದ್ದೆಂಬುದನ್ನು ನಿರ್ಧರಿಸತಕ್ಕದ್ದು;

(ಸಿ) ಕಾರ್ಯಯೋಜನೆ ಪ್ರದೇಶದೊಳಗಿನ ಒಡೆಯರ ಅಥವಾ ನಿವಾಸಿಗಳ ಪ್ರಯೋಜನಕ್ಕಾಗಿ ಮಾತ್ರವೇ ಇರುವಂಥ ಸಾರ್ವಜನಿಕ ಉದ್ದೇಶಕ್ಕಾಗಿ ಅಥವಾ ಯೋಜನಾ ಪ್ರಾಧಿಕಾರದ ಉದ್ದೇಶಕ್ಕಾಗಿ ಬಳಸಿದ, ಹಂಚಿದ ಅಥವಾ ಮೀಸಲಿಟ್ಟ ಪ್ಲಾಟಿಗೆ ಯಾವುದೇ ಅಂಥ ವಂತಿಗೆಯನ್ನು ಸಂಗ್ರಹಿಸತಕ್ಕದ್ದಲ್ಲ; ಮತ್ತು

(ಡಿ) ಕಾರ್ಯಯೋಜನೆಯ ಪ್ರದೇಶದೊಳಗಿರುವ ಒಡೆಯರಿಗೆ ಅಥವಾ ನಿವಾಸಿಗಳಿಗೆ ಭಾಗಶಃ ಅಥವಾ ಸಾರ್ವಜನಿಕರಿಗೆ ಭಾಗಶಃ ಪ್ರಯೋಜನಕಾರಿಯಾಗಿರುವಂಥ ಸಾರ್ವಜನಿಕ ಉದ್ದೇಶಕ್ಕಾಗಿ ಅಥವಾ ಯೋಜನಾ ಪ್ರಾಧಿಕಾರದ ಉದ್ದೇಶಕ್ಕಾಗಿ ಬಳಸಿದ, ಹಂಚಿದ ಅಥವಾ ಮೀಸಲಿಟ್ಟ ಪ್ಲಾಟಿಗೆ ಸಂಗ್ರಹಿಸಿದ ವಂತಿಗೆಯನ್ನು, ಅಂಥ ಬಳಕೆಯಿಂದ, ಹಂಚಿಕೆಯಿಂದ ಅಥವಾ ಮೀಸಲಿಟ್ಟದ್ದರಿಂದ ಸಾರ್ವಜನಿಕರಿಗೆ ಪ್ರಾಪ್ತವಾಗುವುದೆಂದು ಅಂದಾಜು ಮಾಡಿದ ಪ್ರಯೋಜನಕ್ಕನುಸಾರವಾದ ಪ್ರಮಾಣದಲ್ಲಿ ಲೆಕ್ಕ ಹಾಕತಕ್ಕದ್ದು.

(2) ಅಂತಿಮ ಕಾರ್ಯಯೋಜನೆಯಲ್ಲಿ ಸೇರಿಸಲಾದ ಪ್ರತಿಯೊಂದು ಪ್ಲಾಟಿನ ಒಡೆಯನು ಅಂಥ ಪ್ಲಾಟಿಗೆ ಸಂಬಂಧಿಸಿದಂತೆ ಸಂಗ್ರಹಿಸಬಹುದಾದ ವಂತಿಗೆಯನ್ನು ಸಂದಾಯ ಮಾಡಲು ಮುಖ್ಯವಾಗಿ ಹೊಣೆಗಾರನಾಗಿರತಕ್ಕದ್ದು.

**58. ವ್ಯಕ್ತಿಯಿಂದ ಸಂಗ್ರಹಿಸಬಹುದಾದ ವಂತಿಗೆಗೆ ನಿರ್ದಿಷ್ಟ ಮೊಬಲಗನ್ನು ಸೇರಿಸುವುದು ಅಥವಾ ಅದರಿಂದ ಕಳೆಯುವುದು:–** ವ್ಯಕ್ತಿಗೆ ಹಂಚಿಕೆ ಮಾಡಿದ ಆ ಪ್ಲಾಟುಗಳ ಮೇಲಿನ ಎಲ್ಲಾ ಕಟ್ಟಡಗಳೂ ಮತ್ತು ಕಾಮಗಾರಿಗಳೂ ಸೇರಿ ಆ ಅಂತಿಮ ಕಾರ್ಯಯೋಜನೆಯಲ್ಲಿ ಸೇರಿಸಲಾದ ಪ್ಲಾಟುಗಳ ಒಟ್ಟು ಮೌಲ್ಯವು ಅಂಥ ವ್ಯಕ್ತಿಯ ಪ್ಲಾಟುಗಳ ಮೇಲಿನ ಎಲ್ಲಾ ಕಟ್ಟಡಗಳೂ ಮತ್ತು ಕಾಮಗಾರಿಗಳೂ ಸೇರಿ, ಮೂಲ ಪ್ಲಾಟುಗಳ ಒಟ್ಟು ಮೌಲ್ಯಕ್ಕಿಂತ ಎಷ್ಟು ಕಡಿಮೆಯಾಗುವುದೋ ಅಥವಾ ಹೆಚ್ಚಾಗುವುದೋ ಅಷ್ಟು ಮೊಬಲಗನ್ನು, ಸಂದರ್ಭಾನುಸಾರ ಕಾರ್ಯಯೋಜನೆಯನ್ನು ರೂಪಿಸುವ ಉದ್ದೇಶದ ಘೋಷಣೆಯನ್ನು ಮಾಡಿದ ದಿನಾಂಕದಂದು ಅಥವಾ 31ನೇ ಪ್ರಕರಣದ ಮೇರೆಗೆ ಅಧಿಸೂಚನೆ ಹೊರಡಿಸಿದ ದಿನಾಂಕದಂದು ಮತ್ತು ಅದರ ಎಲ್ಲೆ ಗುರುತುಗಳನ್ನು ಬದಲಾವಣೆ ಮಾಡಿದ ಕಾರಣದಿಂದ ಉಂಟಾದ ಮೇಲ್ಪಾಟುಗಳನ್ನು ಹೊರತುಪಡಿಸಿ, ಆ ಕಾರ್ಯಯೋಜನೆಯಲ್ಲಿ ಉದ್ದೇಶಿಸಿದ ಮೇಲ್ಪಾಟುಗಳಿಗೆ ಉಲ್ಲೇಖವನ್ನು ಮಾಡದೆ, ಅಂಥ

ಪ್ರತಿಯೊಂದು ಪ್ಲಾಟನ್ನು ಅದರ ಮಾರುಕಟ್ಟೆ ಮೌಲ್ಯದಲ್ಲಿ ಅಂದಾಜು ಮಾಡಲಾಗಿದ್ದು, ಅಂಥ ವ್ಯಕ್ತಿಯಿಂದ ಸಂಗ್ರಹಿಸಬಹುದಾದ ವಂತಿಗೆಗಳಿಂದ ಕಳೆಯತಕ್ಕದ್ದು ಅಥವಾ ಸಂದರ್ಭಾನುಸಾರ ಅವುಗಳಿಗೆ ಸೇರಿಸತಕ್ಕದ್ದು.

**59. ಮೂಲ ಪ್ಲಾಟಿನಿಂದ ಪುನರ್ ರಚಿತ ಪ್ಲಾಟಿಗೆ ಹಕ್ಕಿನ ವರ್ಗಾವಣೆ ಅಥವಾ ಅಂಥ ಹಕ್ಕನ್ನು ಅಂತ್ಯಗೊಳಿಸುವುದು:–** ಯೋಜನಾ ಕಾರ್ಯಯೋಜನೆಯನ್ನು ರೂಪಿಸುವುದಕ್ಕೆ ಬಾಧಕವಾಗದಂತೆ, ಪಟ್ಟಣ ಯೋಜನಾ ಅಧಿಕಾರಿಯ ಅಭಿಪ್ರಾಯದಲ್ಲಿ ಮೂಲ ಪ್ಲಾಟಿನಲ್ಲಿನ ಯಾವ ಹಕ್ಕನ್ನು ಪುನರ್‌ರಚಿತ ಪ್ಲಾಟಿಗೆ ಪೂರ್ಣವಾಗಿ ಅಥವಾ ಭಾಗಶಃ ವರ್ಗಾವಣೆ ಮಾಡಲು ಸಾಧ್ಯವಾಗುವುದೋ ಆ ಯಾವುದೇ ಹಕ್ಕನ್ನು ಹಾಗೆ ವರ್ಗಾವಣೆ ಮಾಡತಕ್ಕದ್ದು ಮತ್ತು ಪಟ್ಟಣ ಯೋಜನಾ ಅಧಿಕಾರಿಯ ಅಭಿಪ್ರಾಯದಲ್ಲಿ ಮೂಲ ಪ್ಲಾಟಿನಲ್ಲಿನ ಯಾವುದೇ ಹಕ್ಕನ್ನು ಹಾಗೆ ವರ್ಗಾವಣೆ ಮಾಡಲು ಸಾಧ್ಯವಾಗುವುದಿಲ್ಲವೋ ಆ ಯಾವುದೇ ಹಕ್ಕನ್ನು ಅಂತ್ಯಗೊಳಿಸತಕ್ಕದ್ದು:

ಪರಂತು, ಕೃಷಿ ಗೇಣಿಯನ್ನು ಅಂಥ ಗೇಣಿಯ ಎಲ್ಲಾ ಪಕ್ಷಕಾರರ ಸಮ್ಮತಿಯಿಲ್ಲದೆ ಮೂಲ ಪ್ಲಾಟಿನಿಂದ ಪುನರ್‌ರಚಿತ ಪ್ಲಾಟಿಗೆ ವರ್ಗಾವಣೆ ಮಾಡತಕ್ಕದ್ದಲ್ಲ.

**60. ಕಾರ್ಯಯೋಜನೆಯಿಂದ ಹಾನಿಕರವಾಗಿ ಬಾಧಿತವಾದ ಸ್ವತ್ತಿಗೆ ಅಥವಾ ಹಕ್ಕಿಗೆ ಸಂಬಂಧಿಸಿದಂತೆ ನಷ್ಟ ಪರಿಹಾರ:–** ಪಟ್ಟಣ ಯೋಜನಾ ಕಾರ್ಯಯೋಜನೆಯನ್ನು ರೂಪಿಸುವ ಮೂಲಕ ಹಾನಿಕರವಾಗಿ ಬಾಧಿತವಾದಂಥ ಯಾವುದೇ ಸ್ವತ್ತಿನ ಅಥವಾ ಹಕ್ಕಿನ ಒಡೆಯನು, ನಿಯಮಿಸಿದ ಕಾಲದೊಳಗೆ ಪಟ್ಟಣ ಯೋಜನಾ ಅಧಿಕಾರಿಯ ಮುಂದೆ ಅವರು ಕ್ಲೇಮು ಮಾಡಿದರೆ, ಅದಕ್ಕೆ ಸಂಬಂಧಿಸಿದಂತೆ ಯೋಜನಾ ಪ್ರಾಧಿಕಾರದಿಂದ ಅಥವಾ ಪ್ರಯೋಜನವನ್ನು ಪಡೆದ ಯಾರೇ ವ್ಯಕ್ತಿಯಿಂದ ಅಥವಾ ಭಾಗಶಃ ಯೋಜನಾ ಪ್ರಾಧಿಕಾರದಿಂದ ಮತ್ತು ಪ್ರತಿಯೊಂದು ಪ್ರಕರಣದಲ್ಲಿ ಪಟ್ಟಣ ಯೋಜನಾ ಅಧಿಕಾರಿಯು ನಿರ್ಧರಿಸುವಂತೆ ಭಾಗಶಃ ಅಂಥ ವ್ಯಕ್ತಿಯಿಂದ, ನಷ್ಟ ಪರಿಹಾರವನ್ನು ಪಡೆಯಲು ಹಕ್ಕುಳ್ಳವನಾಗಿರತಕ್ಕದ್ದು:

ಪರಂತು, ಅಂಥ ಸ್ವತ್ತಿನ ಅಥವಾ ಹಕ್ಕಿನ ಮೌಲ್ಯವು ಕಾರ್ಯಯೋಜನೆಯಲ್ಲಿ ಉದ್ದೇಶಿಸಿದ ಮೇಲ್ಪಾಟುಗಳನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ಕಾರ್ಯಯೋಜನೆಯನ್ನು ರೂಪಿಸುವ ಉದ್ದೇಶದ ಬಗೆಗಿನ ಘೋಷಣೆಯ ದಿನಾಂಕದಂದು ಇದ್ದ ಅಥವಾ 31ನೇ ಪ್ರಕರಣದ ಮೇರೆಗಿನ ಅಧಿಸೂಚನೆಯ ದಿನಾಂಕದಂದು ಇದ್ದ ಅದರ ಮಾರುಕಟ್ಟೆಯ ಮೌಲ್ಯವಾಗಿರುವುದಾಗಿ ತೀರ್ಮಾನಿಸತಕ್ಕದ್ದು.

**61. ಕೆಲವು ಪ್ರಕರಣಗಳಲ್ಲಿ ನಷ್ಟ ಪರಿಹಾರವನ್ನು ಹೊರತುಪಡಿಸುವುದು ಅಥವಾ ಪರಿಮಿತಿಗೊಳಿಸುವುದು:–** (1) ಪಟ್ಟಣ ಯೋಜನಾ ಕಾರ್ಯಯೋಜನೆಯಲ್ಲಿ ಒಳಗೊಂಡ ಯಾವುವೇ ಉಪಬಂಧಗಳ ಕಾರಣದಿಂದಾಗಿ ಯಾವ ಯಾವ ಬಗೆಯ ಸ್ವತ್ತು ಅಥವಾ ಖಾಸಗಿ ಹಕ್ಕು ಹಾನಿಕರವಾಗಿ ಬಾಧಿತವಾಗಿದೆಯೆಂದು ಹೇಳಲಾಗಿದೆಯೋ ಆ ಯಾವುದೇ ಸ್ವತ್ತಿನ ಅಥವಾ ಖಾಸಗಿ ಹಕ್ಕಿನ ಸಂಬಂಧದಲ್ಲಿ, ಅಂಥ ಕಾರ್ಯ ಯೋಜನೆಯನ್ನು ಯಾವ ಪ್ರದೇಶಕ್ಕೆ ರೂಪಿಸಲಾಗಿದೆಯೋ ಆ ಪ್ರದೇಶಕ್ಕೆ ಅನ್ವಯವಾಗಬಹುದಾದ, ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನ ಮೇರೆಗೆ ಯಾವುದೇ ನಷ್ಟ ಪರಿಹಾರವನ್ನು ಹಾನಿಕರವಾಗಿ ಹಾಗೆ ಬಾಧಕ ಉಂಟು ಮಾಡಿದ್ದಕ್ಕೆ ಸಂದಾಯ ಮಾಡಬೇಕಾಗಿಲ್ಲದಿದ್ದರೆ, ಯಾವುದೇ ನಷ್ಟಪರಿಹಾರವನ್ನು ಸಂದಾಯ ಮಾಡತಕ್ಕದ್ದಲ್ಲ.

(2) ಯಾವುದೇ ಬಗೆಯ ಸ್ವತ್ತನ್ನು ಅಥವಾ ಖಾಸಗಿ ಹಕ್ಕನ್ನು, ಅಂಥ ಪಟ್ಟಣ ಯೋಜನಾ ಕಾರ್ಯಯೋಜನೆಯಲ್ಲಿ ಸೇರಿಸಿರುವ ಪ್ರದೇಶಕ್ಕಾಗಿ ಅಥವಾ ಅದರ ಯಾವುದೇ ಭಾಗಕ್ಕಾಗಿ ಸೌಕರ್ಯವನ್ನು ದೊರಕಿಸಿಕೊಡುವ ದೃಷ್ಟಿಯಿಂದ, ಆ ಕಾರ್ಯಯೋಜನೆಯಲ್ಲಿ ಸೇರಿಸಿದ ಯಾವುದೇ ಉಪಬಂಧವು 26ನೇ ಪ್ರಕರಣದ (2)ನೇ ಉಪಪ್ರಕರಣದ (ಜೆ) ಖಂಡದಲ್ಲಿ ನಿರ್ದಿಷ್ಟಪಡಿಸಿರುವ ಯಾವುದೇ ವಿಷಯಕ್ಕೆ ಸಂಬಂಧಿಸಿದಂತೆ, ಯಾವುವೇ ಷರತ್ತುಗಳನ್ನು ಅಥವಾ ನಿರ್ಬಂಧಗಳನ್ನು ವಿಧಿಸುತ್ತದೆಯೋ ಆ ಯಾವುದೇ ಉಪಬಂಧದ ಕಾರಣದಿಂದಾಗಿ ಹಾನಿಕರವಾಗಿ ಬಾಧಕ ಉಂಟು ಮಾಡಿದೆಯೆಂದು ಭಾವಿಸತಕ್ಕದ್ದಲ್ಲ.

**62. ಒಡೆಯನಿಗೆ ಸಂದಾಯ ಮಾಡಬೇಕಾದ ಮೊಬಲಗು ಅವನಿಂದ ಬರಬೇಕಾದ ಬಾಕಿ ಮೊಬಲಗನ್ನು ಮೀರಿರುವ ಪ್ರಕರಣಗಳಿಗೆ ಉಪಬಂಧ:–** ಮೂಲ ಪ್ಲಾಟಿನ ಒಡೆಯನಿಗೆ ಅಂತಿಮ ಕಾರ್ಯಯೋಜನೆಯಲ್ಲಿ ಪ್ಲಾಟನ್ನು ಒದಗಿಸಿರದಿದ್ದರೆ ಅಥವಾ 57ನೇ ಪ್ರಕರಣದ ಮೇರೆಗೆ ಅವನಿಂದ ಸಂಗ್ರಹಿಸಬೇಕಾದ ವಂತಿಗೆಯು, ಈ ಅಧಿನಿಯಮದ ಯಾವುದೇ ಉಪಬಂಧದ ಮೇರೆಗೆ ಅವನಿಗೆ ಸಂದಾಯ ಮಾಡಬೇಕಾದ ಒಟ್ಟು ಮೊಬಲಗಿಗಿಂತ ಕಡಿಮೆಯಾಗಿದ್ದರೆ, ಅವನ ನಷ್ಟದ ನಿವ್ವಳ ಮೊಬಲಗನ್ನು ಯೋಜನಾ ಪ್ರಾಧಿಕಾರವು ನಗದಾಗಿ ಅಥವಾ ಪಕ್ಷಕಾರರು ಒಪ್ಪಿಕೊಳ್ಳಬಹುದಾದಂಥ ಇತರ ರೀತಿಯಲ್ಲಿ ಅವನಿಗೆ ಸಂದಾಯ ಮಾಡತಕ್ಕದ್ದು.

**63. ಅಭಿವೃದ್ಧಿಗೊಳಿಸಿದ ಪ್ಲಾಟಿನ ಮೌಲ್ಯವು, ಒಡೆಯನು ಸಂದಾಯ ಮಾಡಬೇಕಾದ ಮೊಬಲಗಿಗಿಂತ ಕಡಿಮೆಯಿರುವ ಪ್ರಕರಣಗಳಿಗಾಗಿ ಉಪಬಂಧಗಳು:–** (1) ಅಂತಿಮ ಕಾರ್ಯಯೋಜನೆಯಲ್ಲಿ ಸೇರಿಸಬೇಕಾದ ಪ್ಲಾಟಿನ ಒಡೆಯನಿಂದ ಈ ಅಧಿನಿಯಮದ ಉಪಬಂಧಗಳ ಮೇರೆಗೆ ಯೋಜನಾ ಪ್ರಾಧಿಕಾರಕ್ಕೆ ಬಾಕಿಬರಬೇಕಾದಂಥ ಒಟ್ಟು ಮೊಬಲಗು ಆ ಕಾರ್ಯಯೋಜನೆಯನ್ನು ಪೂರ್ಣಗೊಳಿಸಲಾಗಿದೆ ಎಂಬ ಭಾವನೆಯ ಮೇಲೆ ಅಂದಾಜು ಮಾಡಲಾದ ಅಂಥ ಪ್ಲಾಟಿನ ಮೌಲ್ಯವನ್ನು ಮೀರಿದರೆ, ಪಟ್ಟಣ ಯೋಜನಾ ಅಧಿಕಾರಿಯು, ಆ ಯೋಜನಾ ಪ್ರಾಧಿಕಾರದ ಕೋರಿಕೆಯ ಮೇರೆಗೆ ಅಂಥ ಹೆಚ್ಚಿನ ಮೊಬಲಗನ್ನು ಯೋಜನಾ ಪ್ರಾಧಿಕಾರಕ್ಕೆ ಸಂದಾಯಮಾಡಲು ಅಂಥ ಪ್ಲಾಟಿನ ಒಡೆಯನಿಗೆ ನಿರ್ದೇಶಿಸತಕ್ಕದ್ದು.

(2) ಅಂಥ ಒಡೆಯನು, ನಿಯಮಿಸಿದ ಅವಧಿಯೊಳಗೆ ಅಂಥ ಸಂದಾಯವನ್ನು ಮಾಡಲು ತಪ್ಪಿದರೆ, ಪಟ್ಟಣ ಯೋಜನಾ ಅಧಿಕಾರಿಯು, ತಪ್ಪಿದವನ ಮೂಲ ಪ್ಲಾಟನ್ನು ಸ್ವಾಧೀನಕ್ಕೆ ತೆಗೆದುಕೊಳ್ಳಬೇಕೆಂದು ಯೋಜನಾ ಪ್ರಾಧಿಕಾರವು ಕೋರಿದರೆ, ಹಾಗೆ ಮಾಡತಕ್ಕದ್ದು ಮತ್ತು ಆ ಕಾರ್ಯಯೋಜನೆಯನ್ನು ರೂಪಿಸುವ ಉದ್ದೇಶದ ಘೋಷಣೆಯ ದಿನಾಂಕದಂದು ಅಥವಾ 31ನೇ ಪ್ರಕರಣದ ಮೇರೆಗಿನ ಅಧಿಸೂಚನೆಯ ದಿನಾಂಕದಂದು ಮತ್ತು ಆ ಕಾರ್ಯಯೋಜನೆಯಲ್ಲಿ ಉದ್ದೇಶಿಸಿದ ಮೇಲ್ಪಾಟುಗಳನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ಅದರ ಮಾರುಕಟ್ಟೆ ಮೌಲ್ಯದಲ್ಲಿ ಅಂದಾಜು ಮಾಡಲಾದ ಅಂಥ ಪ್ಲಾಟಿನ ಮೌಲ್ಯವನ್ನು ಆ ಯೋಜನಾ ಪ್ರಾಧಿಕಾರವು ಸಂದಾಯ ಮಾಡಿದ ಮೇಲೆ ಆ ಒಡೆಯ ಮತ್ತು ಪ್ಲಾಟಿನಲ್ಲಿ ಹಿತಾಸಕ್ತಿ ಹೊಂದಿರುವ ವ್ಯಕ್ತಿಗಳೊಳಗೆ ಆ ನಷ್ಟ ಪರಿಹಾರವನ್ನು ಹಂಚತಕ್ಕದ್ದು, ಆ ತರುವಾಯ ಅಂತಿಮ ಕಾರ್ಯಯೋಜನೆಯಲ್ಲಿ ಸೇರಿಸಲಾಗಿರುವ ಆ ಪ್ಲಾಟು ಎಲ್ಲಾ ಪೂರ್ವಾಧಿಗಳಿಂದ ಮುಕ್ತವಾಗಿ, ಆದರೆ ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು, ಆ ಯೋಜನಾ ಪ್ರಾಧಿಕಾರದಲ್ಲಿ ಸಂಪೂರ್ಣವಾಗಿ ನಿಹಿತಗೊಳ್ಳತಕ್ಕದ್ದು:

ಪರಂತು, ಆ ಯೋಜನಾ ಪ್ರಾಧಿಕಾರವು ಮೂಲ ಪ್ಲಾಟಿನ ಮೌಲ್ಯದ ಬಗ್ಗೆ ಮಾಡಿರುವ ಸಂದಾಯವನ್ನು ಕಾರ್ಯಯೋಜನೆಯ ಖರ್ಚುಗಳಲ್ಲಿ ಸೇರಿಸತಕ್ಕದ್ದಲ್ಲ.

**64. ಲೆಕ್ಕದ ಹೊಂದಾಣಿಕೆಯ ಮೂಲಕ ಸಂದಾಯ:–** ಈ ಅಧಿನಿಯಮದ ಮೇರೆಗೆ ಯೋಜನಾ ಪ್ರಾಧಿಕಾರವು ಯಾರೇ ವ್ಯಕ್ತಿಗೆ ಮಾಡಬೇಕಾಗಿರುವ ಎಲ್ಲಾ ಸಂದಾಯಗಳನ್ನು ಸಾಧ್ಯವಾದಷ್ಟು ಮಟ್ಟಿಗೆ, ಸಂಬಂಧಪಟ್ಟ ಆ ಪ್ಲಾಟಿಗೆ ಅಥವಾ ಅವನು ಹಿತಾಸಕ್ತಿಯನ್ನು ಹೊಂದಿರುವಂಥ ಯಾವುದೇ ಇತರ ಪ್ಲಾಟಿಗೆ

ಸಂಬಂಧಿಸಿದಂತೆ ಯೋಜನಾ ಪ್ರಾಧಿಕಾರದಲ್ಲಿ ಅಂಥ ವ್ಯಕ್ತಿಯು ಹೊಂದಿರುವ ಲೆಕ್ಕದಲ್ಲಿ ಹೊಂದಾಣಿಕೆ ಮಾಡುವ ಮೂಲಕ ಮಾಡತಕ್ಕದ್ದು ಮತ್ತು ಅಂಥ ಹೊಂದಾಣಿಕೆಯು ಆಗದಿದ್ದರೆ ನಗದು ರೂಪದಲ್ಲಿ ಅಥವಾ ಪಕ್ಷಕಾರರು ಒಪ್ಪಿಕೊಳ್ಳಬಹುದಾದಂಥ ಇತರ ರೀತಿಯಲ್ಲಿ ಸಂದಾಯ ಮಾಡತಕ್ಕದ್ದು.

**65. ಯೋಜನಾ ಪ್ರಾಧಿಕಾರಕ್ಕೆ ಬರಬೇಕಾದ ಬಾಕಿಯ ನಿವ್ವಳ ಮೊಬಲಗಿನ ಸಂದಾಯ:–** (1) ಅಂತಿಮ ಕಾರ್ಯಯೋಜನೆಯಲ್ಲಿ ಸೇರಿಸಿದ ಪ್ಲಾಟಿನ ಒಡೆಯನು ಈ ಅಧಿನಿಯಮದ ಉಪಬಂಧಗಳ ಮೇರೆಗೆ, ಸಂದಾಯ ಮಾಡಬೇಕಾದ ನಿವ್ವಳ ಮೊಬಲಗನ್ನು, ವಂತಿಗೆದಾರನ ಇಚ್ಛೆಯ ಮೇರೆಗೆ ಒಂದೇ ಮೊತ್ತದಲ್ಲಿ ಅಥವಾ ಹತ್ತು ಕಂತುಗಳನ್ನು ಮೀರದ ವಾರ್ಷಿಕ ಕಂತುಗಳಲ್ಲಿ ಸಂದಾಯ ಮಾಡಬಹುದು. ಒಡೆಯನು ಕಂತುಗಳ ಮೂಲಕ ಮೊಬಲಗನ್ನು ಸಂದಾಯ ಮಾಡಲು ಆಯ್ಕೆ ಮಾಡಿಕೊಂಡರೆ, ಸಂದಾಯ ಮಾಡಬೇಕಾದ ನಿವ್ವಳ ಮೊಬಲಗಿನ ಮೇಲೆ ವಾರ್ಷಿಕ ಶೇಕಡಾ ನಾಲ್ಕೂವರೆಯಂತೆ ಬಡ್ಡಿಯನ್ನು ವಿಧಿಸತಕ್ಕದ್ದು. ಪ್ಲಾಟಿನ ಒಡೆಯನು, ತನಗೆ ನೀಡಿರುವ ನೋಟೀಸಿನಲ್ಲಿ ನಿರ್ದಿಷ್ಟಪಡಿಸಿದ ದಿನಾಂಕದಂದು ಅಥವಾ ಅದಕ್ಕೆ ಮುಂಚೆ ಹಾಗೆ ಆಯ್ಕೆ ಮಾಡಿಕೊಳ್ಳಲು ತಪ್ಪಿದರೆ, ಅವನು ಕಂತುಗಳ ಮೂಲಕ ವಂತಿಗೆಯನ್ನು ಸಂದಾಯ ಮಾಡಲು ಆಯ್ಕೆ ಮಾಡಿಕೊಂಡಿರುವುದಾಗಿ ಭಾವಿಸತಕ್ಕದ್ದು ಮತ್ತು ವಂತಿಗೆಯ ಮೇಲಿನ ಬಡ್ಡಿಯನ್ನು, ಮೇಲೆ ಹೇಳಿದಂತೆ ಯಾವ ದಿನಾಂಕಕ್ಕೆ ಮುಂಚೆ ಆಯ್ಕೆಯನ್ನು ಮಾಡಿಕೊಳ್ಳಲು ಅವನನ್ನು ಅಗತ್ಯಪಡಿಸಲಾಗಿತ್ತೋ ಆ ದಿನಾಂಕಕ್ಕೆ ಮುಂಚಿನ ದಿನಾಂಕ ಎಂದರೆ ನೋಟೀಸಿನಲ್ಲಿ ನಿರ್ದಿಷ್ಟಪಡಿಸಿದ ದಿನಾಂಕದಿಂದ ಲೆಕ್ಕ ಹಾಕತಕ್ಕದ್ದು.

(2) ಅಂತಿಮ ಕಾರ್ಯಯೋಜನೆಯಲ್ಲಿ ಸೇರಿಸಿದ ಎರಡು ಅಥವಾ ಹೆಚ್ಚು ಪ್ಲಾಟುಗಳು ಒಂದೇ ಒಡೆತನದಲ್ಲಿರುವಲ್ಲಿ, ಈ ಅಧಿನಿಯಮದ ಉಪಬಂಧಗಳ ಮೇರೆಗೆ ಅಂಥ ಒಡೆಯನು ಸಂದಾಯ ಮಾಡಬೇಕಾದ ನಿವ್ವಳ ಮೊಬಲಗನ್ನು, ಒಡೆಯನು ಮತ್ತು ಯೋಜನಾ ಪ್ರಾಧಿಕಾರವು ವಿತರಣೆಯ ಬೇರೆ ಬೇರೆ ವಿಧಾನವನ್ನು ಒಪ್ಪಿಕೊಂಡಿದ್ದ ಹೊರತು, ಪ್ರತಿಯೊಂದು ಪ್ಲಾಟಿನ ಸಂಬಂಧದಲ್ಲಿ ಪ್ರಾಪ್ತವಾಗುವುದೆಂದು ಅಂದಾಜು ಮಾಡಲಾಗಿರುವಂಥ ಮೌಲ್ಯವೃದ್ಧಿಯ ಪ್ರಮಾಣಾನುಸಾರವಾಗಿ ಅವನ ಹಲವಾರು ಪ್ಲಾಟುಗಳಿಗೆ ವಿತರಣೆ ಮಾಡತಕ್ಕದ್ದು.

**66. ಒಪ್ಪಂದಗಳನ್ನು ಮಾಡಿಕೊಳ್ಳಲು ಯೋಜನಾ ಪ್ರಾಧಿಕಾರದ ಅಧಿಕಾರ:–** (1) ಯೋಜನಾ ಪ್ರಾಧಿಕಾರವು, ಪಟ್ಟಣ ಯೋಜನಾ ಕಾರ್ಯಯೋಜನೆಯಲ್ಲಿ ಉಪಬಂಧಿಸಬೇಕಾಗಿರುವಂಥ ಯಾವುದೇ ವಿಷಯಕ್ಕೆ ಸಂಬಂಧಿಸಿದಂತೆ ಯಾರೇ ವ್ಯಕ್ತಿಯೊಂದಿಗೆ ಯಾವುದೇ ಒಪ್ಪಂದವನ್ನು, ಅಂಥ ಒಪ್ಪಂದವನ್ನು ಮಾರ್ಪಾಟು ಮಾಡುವ ಅಥವಾ ಅನುಮತಿ ನೀಡದಿರುವ ರಾಜ್ಯ ಸರ್ಕಾರದ ಅಧಿಕಾರಕ್ಕೆ ಒಳಪಟ್ಟು ಮಾಡಿಕೊಳ್ಳಲು ಸಕ್ಷಮವಾಗಿರತಕ್ಕದ್ದು ಮತ್ತು ಅದರಲ್ಲಿ ಅನ್ಯಥಾ ಸ್ಪಷ್ಟವಾಗಿ ಉಪಬಂಧಿಸಿದ್ದ ಹೊರತು ಅಂಥ ಒಪ್ಪಂದವು ಪಟ್ಟಣ ಯೋಜನಾ ಕಾರ್ಯಯೋಜನೆಯು ಯಾವ ದಿನಾಂಕದಂದು ಮತ್ತು ಯಾವ ದಿನಾಂಕದಿಂದ ಜಾರಿಗೆ ಬಂದಿತೋ ಆ ದಿನಾಂಕದಂದು ಮತ್ತು ಆ ದಿನಾಂಕದಿಂದ ಪರಿಣಾಮಕಾರಿಯಾಗತಕ್ಕದ್ದು.

(2) ಅಂಥ ಒಪ್ಪಂದವು VIನೇ ಅಧ್ಯಾಯದಲ್ಲಿ ವಿವರಿಸಿರುವ ಪಟ್ಟಣ ಯೋಜನಾಧಿಕಾರಿಯ ಕರ್ತವ್ಯಗಳಿಗೆ ಅಥವಾ ಅನ್ಯ ಪಕ್ಷಕಾರರ ಹಕ್ಕುಗಳಿಗೆ ಯಾವುದೇ ರೀತಿಯಲ್ಲಿ ಬಾಧಕವನ್ನುಂಟು ಮಾಡತಕ್ಕದ್ದಲ್ಲ. ಆದರೆ ಪಟ್ಟಣ ಯೋಜನಾ ಅಧಿಕಾರಿಯು ಕೈಗೊಳ್ಳಬಹುದಾದ ತೀರ್ಮಾನವು ಏನೇ ಆಗಿದ್ದರೂ, ಒಪ್ಪಂದದ ಪಕ್ಷಕಾರರಿಗೆ ಅದು ಬಂಧನಕಾರಿಯಾಗಿರತಕ್ಕದ್ದು:

ಪರಂತು, ರಾಜ್ಯ ಸರ್ಕಾರವು ಒಪ್ಪಂದವನ್ನು ಮಾರ್ಪಾಟು ಮಾಡಿದರೆ, ಪಕ್ಷಕಾರರಲ್ಲಿ ಯಾರಾದರೂ ಒಬ್ಬರು ಅದನ್ನು ಒಪ್ಪಿಕೊಳ್ಳದಿರಲು ಆಯ್ಕೆ ಮಾಡಿಕೊಂಡರೆ ಅವನು ಆ ಅವಕಾಶವನ್ನು ಹೊಂದಿರತಕ್ಕದ್ದು.

**67. ಬಾಕಿಗಳ ವಸೂಲಿ:–** (1) ಈ ಅಧಿನಿಯಮ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ವಿನಿಯಮನದ ಮೇರೆಗೆ ಯೋಜನಾ ಪ್ರಾಧಿಕಾರಕ್ಕೆ ಬರಬೇಕಾದ ಯಾವುದೇ ಮೊತ್ತವು ಯಾವ ಪ್ಲಾಟಿಗೆ ಸಂಬಂಧಿಸಿದಂತೆ ಅದು ಬರಬೇಕಾಗಿದೆಯೋ, ಆ ಪ್ಲಾಟಿನ ಮೇಲೆ, ರಾಜ್ಯ ಸರ್ಕಾರಕ್ಕೆ ಬರಬೇಕಾದ ಭೂಕಂದಾಯವು ಯಾವುದಾದರೂ ಇದ್ದರೆ, ಆ ಭೂಕಂದಾಯವನ್ನು, ಮೊದಲು ಸಂದಾಯ ಮಾಡುವುದಕ್ಕೆ ಒಳಪಟ್ಟು, ಪ್ಲಾಟಿನ ಮೇಲೆ ಮೊದಲ ಋಣಭಾರವಾಗಿರತಕ್ಕದ್ದು.

(2) ಈ ಅಧಿನಿಯಮದ ಮೇರೆಗೆ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ವಿನಿಯಮನದ ಮೇರೆಗೆ ಯೋಜನಾ ಪ್ರಾಧಿಕಾರಕ್ಕೆ ಬರಬೇಕಾದ ಯಾವುದೇ ಮೊತ್ತಕ್ಕೆ ಸಂಬಂಧಿಸಿದಂತೆ ಈ ಬಗ್ಗೆ ಯುಕ್ತ ನೋಟೀಸನ್ನು ಕೊಡಲಾಗಿದೆಯೋ, ಆ ಯೋಜನಾ ಪ್ರಾಧಿಕಾರವು ನಿಗದಿಪಡಿಸಿದ ದಿನಾಂಕದಂದು ಆ ಯಾವುದೇ ಮೊತ್ತವನ್ನು ಸಂದಾಯ ಮಾಡಿಲ್ಲವೋ ಆ ಮೊತ್ತವನ್ನು ತಪ್ಪಿದವನಿಂದ ಬರಬೇಕಾಗಿದ್ದ ಸ್ವತ್ತಿನ ತೆರಿಗೆಯಾಗಿದ್ದಿದ್ದರೆ ಹೇಗೋ ಹಾಗೆ ತಪ್ಪಿದವನ ಸರಕುಗಳ, ಚರ ಸ್ವತ್ತುಗಳ ಜಪ್ತಿ ಮತ್ತು ಮಾರಾಟದ ಮೂಲಕ ಯೋಜನಾ ಪ್ರಾಧಿಕಾರವು ವಸೂಲು ಮಾಡುವಂಥದ್ದು ಆಗಿರತಕ್ಕದ್ದು.

(3) ಉಪಪ್ರಕರಣ (2)ರಲ್ಲಿ ಉಪಬಂಧಿಸಿರುವ ರೀತಿಯಲ್ಲಿ ಯೋಜನಾ ಪ್ರಾಧಿಕಾರಕ್ಕೆ ಬರಬೇಕಾದ ಬಾಕಿಗಳನ್ನು ವಸೂಲು ಮಾಡುವುದಕ್ಕೆ ಬದಲು ಅಥವಾ (2)ನೇ ಉಪಪ್ರಕರಣದಲ್ಲಿ ಉಪಬಂಧಿಸಿರುವ ರೀತಿಯಲ್ಲಿ ಯೋಜನಾ ಪ್ರಾಧಿಕಾರಕ್ಕೆ ಬರಬೇಕಾದ ಬಾಕಿಗಳ ಭಾಗವನ್ನು ವಸೂಲು ಮಾಡಿದ ತರುವಾಯ, ಹಾಗೆ ತಪ್ಪಿದವನಿಂದ ಬರಬೇಕಾದ ಯಾವುದೇ ಮೊತ್ತವನ್ನು ಅಥವಾ ಸಂದರ್ಭಾನುಸಾರ ಬರಬೇಕಾದ ಯಾವುದೇ ಮೊತ್ತದ ಶಿಲ್ಕನ್ನು ಸಕ್ಷಮ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಯಾವುದೇ ನ್ಯಾಯಾಲಯದಲ್ಲಿ ದಾವೆಯನ್ನು ಹೂಡುವ ಮೂಲಕ ಅವನಿಂದ ವಸೂಲು ಮಾಡಬಹುದು.

**68. ಅಭಿವೃದ್ಧಿ ಯೋಜನೆಗಾಗಿ ಅಥವಾ ಪಟ್ಟಣ ಯೋಜನಾ ಕಾರ್ಯಯೋಜನೆಯನ್ನು ರೂಪಿಸುವುದಕ್ಕಾಗಿ ಅಥವಾ ಅದನ್ನು ಕಾರ್ಯಗತಗೊಳಿಸುವುದಕ್ಕಾಗಿ ಹಣವನ್ನು ಸಾಲ ಪಡೆಯಲು ಯೋಜನಾ ಪ್ರಾಧಿಕಾರದ ಅಧಿಕಾರಗಳು:–** (1) ಯೋಜನಾ ಪ್ರಾಧಿಕಾರವು, ಸ್ಥೂಲ ಅಥವಾ ಸಮಗ್ರ ಅಭಿವೃದ್ಧಿ ಯೋಜನೆಯ ಅಥವಾ ಪಟ್ಟಣ ಯೋಜನಾ ಕಾರ್ಯಯೋಜನೆಯನ್ನು ರೂಪಿಸುವ ಅಥವಾ ಅದನ್ನು ಕಾರ್ಯಗತಗೊಳಿಸುವ ಉದ್ದೇಶಕ್ಕಾಗಿ ಸಾಲಗಳನ್ನು ಯಾವ ಅಧಿನಿಯಮದ ಮೇರೆಗೆ ಆ ಯೋಜನಾ ಪ್ರಾಧಿಕಾರವನ್ನು ಸ್ಥಳೀಯ ಪ್ರಾಧಿಕಾರವೆಂದು ರಚಿಸಲಾಗಿದೆಯೋ ಆ ಅಧಿನಿಯಮದ ಉಪಬಂಧಗಳಿಗೆ ಅನುಸಾರವಾಗಿ ಅಥವಾ ಅಂಥ ಅಧಿನಿಯಮವು ಹಾಗೆ ಸಾಲ ಪಡೆಯುವುದಕ್ಕೆ ಯಾವುದೇ ಉಪಬಂಧವನ್ನು ಒಳಗೊಂಡಿರದಿದ್ದರೆ, ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿಗೆ ಅನುಸಾರವಾಗಿ ಪಡೆದುಕೊಳ್ಳಬಹುದು.

(2) ಈ ಅಧಿನಿಯಮದ ಮೇರೆಗೆ ಅಥವಾ ಸ್ಥೂಲ ಅಥವಾ ಸಮಗ್ರ ಅಭಿವೃದ್ಧಿ ಯೋಜನೆಗೆ ಅಥವಾ ಪಟ್ಟಣ ಯೋಜನಾ ಕಾರ್ಯಯೋಜನೆಗೆ ಸಂಬಂಧಿಸಿದಂತೆ ಯೋಜನಾ ಪ್ರಾಧಿಕಾರ ಅಥವಾ ರಾಜ್ಯ ಸರ್ಕಾರವು ವಹಿಸಿದ ಯಾವುದೇ ವೆಚ್ಚವನ್ನು ಆ ಯೋಜನಾ ಪ್ರಾಧಿಕಾರದ ನಿಧಿಗಳಿಂದ ಭರಿಸಬಹುದು.

## [1][ಅಧ್ಯಾಯ - VIII

## ಹಣಕಾಸು, ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ

1. 1964ರ ಅಧಿನಿಯಮ ಸಂ.14ರ ಮೂಲಕ 26-3-1964 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

**68ಎ. ಯೋಜನಾ ಪ್ರಾಧಿಕಾರದ ನಿಧಿಗಳು:-** (1) ಪ್ರತಿಯೊಂದು ಯೋಜನಾ ಪ್ರಾಧಿಕಾರವು, ಪ್ರತ್ಯೇಕ ನಿಧಿಯನ್ನು ಹೊಂದಿರತಕ್ಕದ್ದು ಮತ್ತು ನಿರ್ವಹಿಸತಕ್ಕದ್ದು, ಅದಕ್ಕೆ,-

(ಎ) ಅನುದಾನಗಳ, ಸಾಲಗಳ, ಮುಂಗಡಗಳ ರೂಪದಲ್ಲಿ ಅಥವಾ ಅನ್ಯಥಾ ರಾಜ್ಯ ಸರ್ಕಾರದಿಂದ ಯೋಜನಾ ಪ್ರಾಧಿಕಾರವು ಸ್ವೀಕರಿಸಿದ ಎಲ್ಲಾ ಹಣವನ್ನು;

(ಬಿ) ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ನಿಯಮಗಳ, ವಿನಿಯಮನಗಳ ಅಥವಾ ಉಪವಿಧಿಗಳ ಮೇರೆಗೆ ಯೋಜನಾ ಪ್ರಾಧಿಕಾರವು ಸ್ವೀಕರಿಸಿದ ಎಲ್ಲಾ ಚಾರ್ಜುಗಳನ್ನು ಅಥವಾ ಫೀಜುಗಳನ್ನು;

(ಸಿ) 4ಸಿ ಪ್ರಕರಣದ ಮೇರೆಗೆ ರಚಿಸಲಾದ ಯೋಜನಾ ಪ್ರಾಧಿಕಾರದ ಸಂದರ್ಭದಲ್ಲಿ, ಅಂಥ ಯೋಜನಾ ಪ್ರಾಧಿಕಾರಕ್ಕೆ, ಅಂಥ ಸ್ಥಳೀಯ ಪ್ರಾಧಿಕಾರ ಅಥವಾ ಸ್ಥಳೀಯ ಪ್ರಾಧಿಕಾರಗಳು, ರಾಜ್ಯ ಸರ್ಕಾರವು ಕಾಲಕಾಲಕ್ಕೆ ಕೊಡಬೇಕೆಂದು ಅಗತ್ಯಪಡಿಸಿದಂತೆ, ಆ ಯೋಜನಾ ಪ್ರದೇಶದಲ್ಲಿ ಸೇರಿಸಿದ ಆ ಪ್ರದೇಶದ ಸ್ಥಳೀಯ ಪ್ರಾಧಿಕಾರದ ಅಥವಾ ಸ್ಥಳೀಯ ಪ್ರಾಧಿಕಾರಗಳ ನಿಧಿಯಿಂದ ಅಥವಾ ನಿಧಿಗಳಿಂದ ಅಂಥ ವಂತಿಗೆಗಳನ್ನು;

(ಡಿ) ಇತರ ಯಾವುದೇ ಮೂಲದಿಂದ ಯೋಜನಾ ಪ್ರಾಧಿಕಾರವು ಸ್ವೀಕರಿಸಿದ ಎಲ್ಲಾ ಹಣವನ್ನು

- ಜಮೆ ಮಾಡತಕ್ಕದ್ದು.

(2) ಈ ನಿಧಿಯನ್ನು,-

(ಎ) ಈ ಅಧಿನಿಯಮದ ಜಾರಿಗಾಗಿ ವಹಿಸಿದ ವೆಚ್ಚ;

(ಬಿ) ಅಭಿವೃದ್ಧಿಯ ಉದ್ದೇಶಗಳಿಗಾಗಿ ಯೋಜನಾ ಪ್ರದೇಶದಲ್ಲಿ ಭೂಮಿಯ ಸ್ವಾಧೀನತೆಗಾಗಿ ಖರ್ಚು;

(ಸಿ) ರಾಜ್ಯ ಸರ್ಕಾರವು ನಿರ್ದೇಶಿಸಬಹುದಾದಂಥ ಇತರ ಉದ್ದೇಶಗಳಿಗಾಗಿನ ವೆಚ್ಚ

- ಇವುಗಳನ್ನು ಭರಿಸಲು ವಿನಿಯೋಗಿಸತಕ್ಕದ್ದು.

**68ಬಿ. ಯೋಜನಾ ಪ್ರಾಧಿಕಾರದ ಆಯವ್ಯಯ ಪತ್ರ:-** ಪ್ರತಿಯೊಂದು ಯೋಜನಾ ಪ್ರಾಧಿಕಾರವು, ನಿಯಮಿಸಬಹುದಾದಂಥ ನಮೂನೆಯಲ್ಲಿ ಮತ್ತು ಪ್ರತಿ ವರ್ಷವು ಅಂಥ ಕಾಲದಲ್ಲಿ ಮುಂಬರುವ ಹಣಕಾಸು ವರ್ಷಕ್ಕೆ ಸಂಬಂಧಿಸಿದಂತೆ ಈ ಅಧಿನಿಯಮದ ಜಾರಿಗೆ ಸಂಬಂಧಿಸಿದಂತೆ ಯೋಜನಾ ಪ್ರಾಧಿಕಾರದ ಅಂದಾಜು ಜಮೆಗಳನ್ನು ಮತ್ತು ವೆಚ್ಚವನ್ನು ತೋರಿಸುವ ಆಯವ್ಯಯ ಪತ್ರವನ್ನು ಸಿದ್ಧಪಡಿಸತಕ್ಕದ್ದು ಮತ್ತು ನಿಯಮಿಸಬಹುದಾದಂಥ ಸಂಖ್ಯೆಯ ಅದರ ಪ್ರತಿಗಳನ್ನು ರಾಜ್ಯ ಸರ್ಕಾರಕ್ಕೆ ಮತ್ತು ಮಂಡಲಿಗೆ ಕಳುಹಿಸತಕ್ಕದ್ದು.

**68ಸಿ. ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ:-** (1) ಪ್ರತಿಯೊಂದು ಯೋಜನಾ ಪ್ರಾಧಿಕಾರವು, ಸರಿಯಾದ ಲೆಕ್ಕಪತ್ರಗಳನ್ನು ಮತ್ತು ಅದಕ್ಕೆ ಸಂಬಂಧಪಟ್ಟ ಇತರ ದಾಖಲೆಗಳನ್ನು ಇಟ್ಟುಕೊಂಡು ಬರತಕ್ಕದ್ದು ಮತ್ತು ನಿಯಮಿಸಬಹುದಾದಂಥ ನಮೂನೆಯಲ್ಲಿ ಜಮಾಖರ್ಚು ಪಟ್ಟಿಯನ್ನು ಒಳಗೊಂಡು, ಲೆಕ್ಕಪತ್ರಗಳ ವಾರ್ಷಿಕ ವಿವರ ಪಟ್ಟಿಕೆಯನ್ನು ಸಿದ್ಧಪಡಿಸತಕ್ಕದ್ದು.

(2) ಪ್ರತಿಯೊಂದು ಯೋಜನಾ ಪ್ರಾಧಿಕಾರದ ಲೆಕ್ಕಪತ್ರಗಳು, ರಾಜ್ಯ ಲೆಕ್ಕಪತ್ರ ನಿಯಂತ್ರಕನಿಂದ ವಾರ್ಷಿಕ ಲೆಕ್ಕ ಪರಿಶೋಧನೆಗೆ ಒಳಪಟ್ಟಿರತಕ್ಕದ್ದು.

(3) ರಾಜ್ಯ ಲೆಕ್ಕಪತ್ರಗಳ ನಿಯಂತ್ರಕರು ಪ್ರಮಾಣೀಕರಿಸಿದಂತೆ ಪ್ರತಿಯೊಂದು ಯೋಜನಾ ಪ್ರಾಧಿಕಾರದ ಲೆಕ್ಕಪತ್ರಗಳನ್ನು ಅದರ ಬಗೆಗಿನ ಲೆಕ್ಕ ಪರಿಶೋಧನಾ ವರದಿಯೊಂದಿಗೆ ರಾಜ್ಯ ಸರ್ಕಾರಕ್ಕೆ ಮತ್ತು ಮಂಡಲಿಗೆ ವಾರ್ಷಿಕವಾಗಿ ಕಳುಹಿಸತಕ್ಕದ್ದು.

**68ಡಿ. ವಾರ್ಷಿಕ ವರದಿಗಳು:-** ಪ್ರತಿಯೊಂದು ಯೋಜನಾ ಪ್ರಾಧಿಕಾರವು ಪ್ರತಿಯೊಂದು ವರ್ಷಕ್ಕಾಗಿ ಆ ವರ್ಷದಲ್ಲಿ ಈ ಅಧಿನಿಯಮದ ಮೇರೆಗೆ ಅದರ ಕಾರ್ಯ ಚಟುವಟಿಕೆಗಳ ಬಗ್ಗೆ ವರದಿಯನ್ನು ಸಿದ್ಧಪಡಿಸತಕ್ಕುದು ಮತ್ತು ನಿಯಮಿಸಬಹುದಾದಂಥ ದಿನಾಂಕದಂದು ಅಥವಾ ಅದಕ್ಕೆ ಮುಂಚೆ ಅಂಥ ನಮೂನೆಯಲ್ಲಿ ಆ ರಾಜ್ಯ ಸರ್ಕಾರಕ್ಕೆ ಮತ್ತು ಮಂಡಳಿಗೆ ಆ ವರದಿಯನ್ನು ಸಲ್ಲಿಸತಕ್ಕದ್ದು][1]

1. 1964ರ ಅಧಿನಿಯಮ ಸಂ.14ರ ಮೂಲಕ 26-3-1964 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

## ಅಧ್ಯಾಯ - IX

## ಭೂಆರ್ಜನೆ

[1][**69. ಬೃಹತ್ ಯೋಜನೆಯಲ್ಲಿ ಕೆಲವು ಉದ್ದೇಶಗಳಿಗಾಗಿ ಗೊತ್ತುಪಡಿಸಿದ ಭೂಮಿಯ ಆರ್ಜನೆ:-** (1) 12ನೇ ಪ್ರಕರಣದ (1)ನೇ ಉಪಪ್ರಕರಣದ (ಬಿ), (ಸಿ) ಅಥವಾ (ಡಿ) ಖಂಡದಲ್ಲಿ ನಿರ್ದಿಷ್ಟಪಡಿಸಿದ ಉದ್ದೇಶಕ್ಕಾಗಿ ಅಥವಾ 12ನೇ ಪ್ರಕರಣದ (1)ನೇ ಉಪಪ್ರಕರಣದ (ಎ) ಖಂಡದಲ್ಲಿ ನಿರ್ದಿಷ್ಟಪಡಿಸಿದ ಆ ಭೂಮಿಗಳನ್ನು ಯಾವುದೇ ಸಾರ್ವಜನಿಕ ಉದ್ದೇಶಕ್ಕಾಗಿ ಬೃಹತ್ ಯೋಜನೆಯಲ್ಲಿ ಗೊತ್ತುಪಡಿಸಿದ ಯಾವುದೇ ಭೂಮಿಯನ್ನು ಒಪ್ಪಂದದ ಮೂಲಕ ಅಥವಾ ರಾಜ್ಯದಲ್ಲಿ ಜಾರಿಯಲ್ಲಿರುವ ಭೂ ಆರ್ಜನಾ ಅಧಿನಿಯಮ, 1894 (1894ರ ಕೇಂದ್ರ ಅಧಿನಿಯಮ 1)ರ ಮೇರೆಗೆ ಯೋಜನಾ ಪ್ರಾಧಿಕಾರವು ಆರ್ಜಿಸಬಹುದು. ಆ ಭೂಮಿಯನ್ನು ಭೂ ಆರ್ಜನಾ ಅಧಿನಿಯಮ, 1894ರ ಮೇರೆಗೆ ಆರ್ಜಿಸಿದರೆ, ಈ ಅಧಿನಿಯಮದ 72ನೇ ಪ್ರಕರಣದಿಂದ ತಿದ್ದುಪಡಿಯಾದ ಸದರಿ ಅಧಿನಿಯಮದ ಉಪಬಂಧಗಳು ಅಂಥ ಭೂಮಿಯ ಆರ್ಜನೆಗಾಗಿ ನಷ್ಟ ಪರಿಹಾರವನ್ನು ನಿರ್ಧರಿಸುವುದಕ್ಕೆ ಅನ್ವಯವಾಗತಕ್ಕದ್ದು.

(2) 12ನೇ ಪ್ರಕರಣದ (1)ನೇ ಉಪಪ್ರಕರಣದ (ಬಿ) ಖಂಡದ ಉದ್ದೇಶಕ್ಕಾಗಿ ನಿರ್ದಿಷ್ಟಪಡಿಸಿದ ಭೂಮಿಯನ್ನು ಹೊರತುಪಡಿಸಿ, ಗೊತ್ತುಪಡಿಸಲಾದ ಭೂಮಿಯನ್ನು 13ನೇ ಪ್ರಕರಣದ (4)ನೇ ಉಪ ಪ್ರಕರಣದ ಮೇರೆಗೆ ಬೃಹತ್ ಯೋಜನೆಯನ್ನು ರಾಜ್ಯಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ ಐದು ವರ್ಷಗಳೊಳಗೆ ಒಪ್ಪಂದದ ಮೂಲಕ ಗೊತ್ತುಪಡಿಸಿದ ಭೂಮಿಯನ್ನು ಆರ್ಜಿಸಿಲ್ಲದಿದ್ದರೆ, ಅಥವಾ ಭೂ ಆರ್ಜನಾ ಅಧಿನಿಯಮದ ಮೇರೆಗೆ ಆ ವ್ಯವಹರಣೆಗಳನ್ನು ಅಂಥ ಅವಧಿಯೊಳಗೆ ಪ್ರಾರಂಭಿಸದಿದ್ದರೆ, ಹಾಗೆ ರದ್ದಾಗಿರುವುದಾಗಿ ಭಾವಿಸತಕ್ಕದ್ದು.][1]

1. 2005ರ ಅಧಿನಿಯಮ ಸಂಖ್ಯೆ 1ರ ಮೂಲಕ 14-2-2005ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**70. ಕಾರ್ಯಯೋಜನೆಯ ಅಥವಾ ಅಭಿವೃದ್ಧಿ ಯೋಜನೆಯ ಉದ್ದೇಶಗಳಿಗಾಗಿ ಭೂಆರ್ಜನೆಯನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಎಂದು ಭಾವಿಸುವುದು:–** ಪಟ್ಟಣ ಯೋಜನಾ ಕಾರ್ಯಯೋಜನೆಯ ಅಥವಾ [1][ಬೃಹತ್ ಯೋಜನೆ][1]ಯ ಉದ್ದೇಶಕ್ಕಾಗಿ ಬೇಕಾದ ಭೂಮಿಯನ್ನು ಭೂಆರ್ಜನಾ ಅಧಿನಿಯಮ, 1894ರ ಅರ್ಥ ವ್ಯಾಪ್ತಿಯೊಳಗೆ ಸಾರ್ವಜನಿಕ ಉದ್ದೇಶಕ್ಕಾಗಿ ಬೇಕಾದ ಭೂಮಿ ಎಂಬುದಾಗಿ ಭಾವಿಸತಕ್ಕದ್ದು.

1. 2005ರ ಅಧಿನಿಯಮ ಸಂಖ್ಯೆ 1ರ ಮೂಲಕ 14–2–2005ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**71. ಕಾರ್ಯಯೋಜನೆಯಲ್ಲಿ ಸೇರಿಸಲಾದ ಭೂಮಿಗಳನ್ನು ಆರ್ಜಿಸಲು ರಾಜ್ಯ ಸರ್ಕಾರದ ಅಧಿಕಾರ:–** (1) ಪಟ್ಟಣ ಯೋಜನಾ ಕಾರ್ಯಯೋಜನೆಯಲ್ಲಿ ಸೇರಿಸಲಾದ ಯಾವುದೇ ಭೂಮಿಯು ಆ ಕಾರ್ಯಯೋಜನೆಯಲ್ಲಿ ಯಾವ ಉದ್ದೇಶಕ್ಕಾಗಿ ಅದನ್ನು ಸೇರಿಸಲಾಗಿದೆಯೋ ಆ ಉದ್ದೇಶವನ್ನು ಹೊರತುಪಡಿಸಿ ಇತರ ಸಾರ್ವಜನಿಕ ಉದ್ದೇಶಕ್ಕಾಗಿ ಬೇಕಾಗಿದೆಯೆಂದು ಯಾವುದೇ ಕಾಲದಲ್ಲಿ ರಾಜ್ಯ ಸರ್ಕಾರವು ಅಭಿಪ್ರಾಯಪಟ್ಟರೆ, ಅದು, ಭೂಆರ್ಜನಾ ಅಧಿನಿಯಮ, 1894ರ 6ನೇ ಪ್ರಕರಣದಲ್ಲಿ ಉಪಬಂಧಿಸಿರುವ ರೀತಿಯಲ್ಲಿ ಸರ್ಕಾರಿ ರಾಜಪತ್ರದಲ್ಲಿ ಆ ಬಗ್ಗೆ ಘೋಷಣೆಯನ್ನು ಮಾಡಬಹುದು. ಹಾಗೆ ಪ್ರಕಟಿಸಿದ ಘೋಷಣೆಯನ್ನು ಸದರಿ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಸದರಿ ಪ್ರಕರಣದ ಮೇರೆಗೆ ಕ್ರಮಬದ್ಧವಾಗಿ ಮಾಡಿದ ಘೋಷಣೆಯಾಗಿರುವುದಾಗಿ ಭಾವಿಸತಕ್ಕದ್ದು.

(2) ಉಪಪ್ರಕರಣ (1)ರ ಮೇರೆಗೆ ಘೋಷಣೆಯನ್ನು ಪ್ರಕಟಿಸಿದ ಮೇಲೆ ಜಿಲ್ಲಾಧಿಕಾರಿಯು ಆ ಭೂಮಿಯ ಆರ್ಜನೆಗೆ ಕ್ರಮವನ್ನು ಕೈಗೊಳ್ಳಲು ಮುಂದುವರೆಯತಕ್ಕದ್ದು ಮತ್ತು ಈ ಅಧಿನಿಯಮದ 72ನೇ ಪ್ರಕರಣದ ಮೂಲಕ ತಿದ್ದುಪಡಿಯಾದಂತೆ ಭೂಆರ್ಜನಾ ಅಧಿನಿಯಮ, 1894ರ ಉಪಬಂಧಗಳು ಸಾಧ್ಯವಾಗಬಹುದಾದಷ್ಟರ ಮಟ್ಟಿಗೆ ಸದರಿ ಭೂಮಿಯ ಆರ್ಜನೆಗೆ ಅನ್ವಯವಾಗತಕ್ಕದ್ದು.

(3) ಭೂ ಆರ್ಜನಾ ಅಧಿನಿಯಮ, 1894ರ ಮೇರೆಗಿನ ವ್ಯವಹರಣೆಗಳಲ್ಲಿ ಸಂಬಂಧಪಟ್ಟ ಯೋಜನಾ ಪ್ರಾಧಿಕಾರವನ್ನು, ಆರ್ಜಿಸಿದ ಭೂಮಿಯಲ್ಲಿ ಹಿತಾಸಕ್ತಿಯನ್ನು ಹೊಂದಿರುವ ವ್ಯಕ್ತಿಯಾಗಿರುವುದಾಗಿ ಭಾವಿಸತಕ್ಕದ್ದು ಮತ್ತು ಯೋಜನಾ ಪ್ರಾಧಿಕಾರಕ್ಕೆ ನೀಡಬೇಕಾದ ನಷ್ಟ ಪರಿಹಾರದ ಮೊಬಲಗನ್ನು ನಿರ್ಧರಿಸುವಲ್ಲಿ, ಜಿಲ್ಲಾಧಿಕಾರಿಯು ಅಥವಾ ಸಂದರ್ಭಾನುಸಾರ ನ್ಯಾಯಾಲಯವು 70ನೇ ಪ್ರಕರಣದ ಮೇರೆಗೆ ಅಥವಾ ಅನ್ಯಥಾ, ಸದರಿ ಭೂಮಿಯನ್ನು ಆರ್ಜಿಸುವುದಕ್ಕಾಗಿ, ಯೋಜನಾ ಪ್ರಾಧಿಕಾರವು ಸಂದಾಯ ಮಾಡಿದ ಮೌಲ್ಯ ಯಾವುದಾದರೂ ಇದ್ದರೆ, ಅದನ್ನು ಮತ್ತು ಯೋಜನಾ ಪ್ರಾಧಿಕಾರವು ವಹಿಸಿದ ಮತ್ತು ಅಂಥ ಆರ್ಜನೆಯ ನಿಮಿತ್ತ ಕಾರ್ಯಯೋಜನೆಯನ್ನು ವ್ಯತ್ಯಾಸಗೊಳಿಸುವುದರ ಕಾರಣದಿಂದ ನಿರರ್ಥಕವಾಗಿರುವ, ಕಾರ್ಯಯೋಜನೆಯ ಪ್ರಮಾಣಾನುಸಾರ ಯಾವುದಾದರೂ ಇದ್ದರೆ, ಅದನ್ನು ಪರಿಗಣನೆಗೆ ತೆಗೆದುಕೊಳ್ಳಬಹುದು.

(4) ಭೂ ಆರ್ಜನಾ ಅಧಿನಿಯಮ, 1894ರ 16ನೇ ಪ್ರಕರಣದ ಅಥವಾ ಸಂದರ್ಭಾನುಸಾರ 17ನೇ ಪ್ರಕರಣದ ಮೇರೆಗೆ ರಾಜ್ಯ ಸರ್ಕಾರದಲ್ಲಿ ಆ ಭೂಮಿಯು ನಿಹಿತಗೊಂಡ ಮೇಲೆ, ಕಾರ್ಯಯೋಜನೆಯು ಭೂಮಿಯ ಆರ್ಜನೆಯ ಕಾರಣದಿಂದಾಗಿ ಸೂಕ್ತವಾಗಿ ವ್ಯತ್ಯಾಸಗೊಂಡಿರುವುದಾಗಿ ಭಾವಿಸತಕ್ಕದ್ದು.

**72. ಈ ಅಧಿನಿಯಮದ ಮೇರೆಗೆ ಆರ್ಜನೆಯ ಉದ್ದೇಶಗಳಿಗಾಗಿ ಭೂಆರ್ಜನಾ ಅಧಿನಿಯಮ, 1894ರ 23ನೇ ಪ್ರಕರಣದ ಮತ್ತು 24ನೇ ಪ್ರಕರಣದ ತಿದ್ದುಪಡಿ:–** ಈ ಅಧಿನಿಯಮದ ಮೇರೆಗೆ ಪಟ್ಟಣ ಯೋಜನಾ ಕಾರ್ಯಯೋಜನೆಯ ಅಥವಾ ಅಭಿವೃದ್ಧಿ ಯೋಜನೆಯ ಉದ್ದೇಶಗಳಿಗಾಗಿ ಯಾವುದೇ ಭೂಮಿಯನ್ನು ಕಡ್ಡಾಯವಾಗಿ ಆರ್ಜಿಸಿದಾಗ,–

(ಎ) ಭೂ ಆರ್ಜನಾ ಅಧಿನಿಯಮ, 1894ರ 23ನೇ ಪ್ರಕರಣಕ್ಕೆ ಬದಲಾಗಿ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ,–

**"23. ನಷ್ಟಪರಿಹಾರವನ್ನು ನಿರ್ಧರಿಸುವಲ್ಲಿ ಪರಿಗಣಿಸಬೇಕಾದ ವಿಷಯಗಳು:–** [1][(1)] ಈ ಅಧಿನಿಯಮದ ಮೇರೆಗೆ ಆರ್ಜಿಸಿದ ಯಾವುದೇ ಭೂಮಿಗೆ ಅಥವಾ ಅದರಲ್ಲಿನ ಯಾವುದೇ ಹಿತಾಸಕ್ತಿಗೆ ನೀಡಬೇಕಾದ ನಷ್ಟ ಪರಿಹಾರದ ಮೊಬಲಗನ್ನು ನಿರ್ಧರಿಸುವಲ್ಲಿ, ನ್ಯಾಯಾಲಯವು ಈ ಮುಂದಿನವುಗಳನ್ನು ಪರಿಗಣಿಸತಕ್ಕದ್ದು,–

1. 1991ರ ಅಧಿನಿಯಮ ಸಂ.14ರ ಮೂಲಕ 26–3–1964 ರಿಂದ ಜಾರಿಗೆ ಬರುವಂತೆ ಪುನರ್ ಅಂಕಿತಗೊಳಿಸಲಾಗಿದೆ.

[1][2][(1) (i) ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961 (ಇಲ್ಲಿ ಇನ್ನು ಮುಂದೆ ಈ ಪ್ರಕರಣದಲ್ಲಿ ಸದರಿ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ)ರ 69ನೇ ಪ್ರಕರಣದ (2)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಿದ, ಗೊತ್ತುಪಡಿಸಿದ ಭೂಮಿಯ ಆರ್ಜನೆಯ ಸಂದರ್ಭದಲ್ಲಿ, ಸದರಿ ಅಧಿನಿಯಮದ 13ನೇ ಪ್ರಕರಣದ (4)ನೇ ಉಪ ಪ್ರಕರಣದ ಮೇರೆಗೆ ಆ ಬೃಹತ್ ಯೋಜನೆಯನ್ನು ಪ್ರಕಟಿಸಿದ ದಿನಾಂಕದಂದು ಇದ್ದ ಮಾರುಕಟ್ಟೆ ಮೌಲ್ಯ; ಮತ್ತು

(ii) ಸದರಿ ಅಧಿನಿಯಮದ ಮೇರೆಗೆ ರೂಪಿಸಿದ ಪಟ್ಟಣ ಯೋಜನಾ ಕಾರ್ಯಯೋಜನೆಯಲ್ಲಿ ಸೇರಿಸಿದ ಯಾವುದೇ ಭೂಮಿಯ ಆರ್ಜನೆಯ ಸಂದರ್ಭದಲ್ಲಿ ಸದರಿ ಅಧಿನಿಯಮದ 45ನೇ ಪ್ರಕರಣದ (2)ನೇ ಉಪಪ್ರಕರಣದ ಮೇರೆಗೆ ಅಂಥ ಕಾರ್ಯಯೋಜನೆಯು ಜಾರಿಗೆ ಬರುವಂಥ ದಿನಾಂಕದಂದು ಇದ್ದ ಮಾರುಕಟ್ಟೆ ಮೌಲ್ಯ;][1]

1. 1964ರ ಅಧಿನಿಯಮ ಸಂಖ್ಯೆ 14ರ ಮೂಲಕ 26–3–1964ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ ಮತ್ತು 2005ರ ಅಧಿನಿಯಮ ಸಂಖ್ಯೆ 1ರ ಮೂಲಕ 14–2–2005ರಿಂದ ಜಾರಿಗೆ ಬರುವಂತೆ ಪುನಃ ಪ್ರತಿಯೋಜಿಸಲಾಗಿದೆ.

(2) 6ನೇ ಪ್ರಕರಣದ ಮೇರೆಗೆ ಘೋಷಣೆಯನ್ನು ಪ್ರಕಟಿಸಿದ ದಿನಾಂಕದಂದು ಯಾವ ಬಳಕೆಗಾಗಿ ಆ ಭೂಮಿಯನ್ನು ಬಳಕೆ ಮಾಡಲಾಗಿತ್ತೋ ಆ ಬಳಕೆ;

(3) ಅವನಿಂದ ಸ್ವಾಧೀನವನ್ನು ತೆಗೆದುಕೊಂಡಾಗ ಆ ಕಾಲದಲ್ಲಿ ಭೂಮಿಯ ಮೇಲೆ ಇರಬಹುದಾದಂಥ ಯಾವುದೇ ಬೆಳೆದು ನಿಂತಿರುವ ಬೆಳೆಗಳನ್ನು ಅಥವಾ ಮರಗಳನ್ನು ಸಾಗಿಸಿರುವ ಕಾರಣದಿಂದಾಗಿ ಹಿತಾಸಕ್ತಿಯನ್ನು ಹೊಂದಿರುವ ವ್ಯಕ್ತಿಯು ಅನುಭವಿಸಿದ ಹಾನಿ;

(4) ಅಂಥ ಭೂಮಿಯನ್ನು ಅವನ ಇತರ ಭೂಮಿಯಿಂದ ಬೇರ್ಪಡಿಸಿರುವ ಕಾರಣದಿಂದಾಗಿ ಸ್ವಾಧೀನವನ್ನು ಅವನಿಂದ ತೆಗೆದುಕೊಳ್ಳುವ ಕಾಲದಲ್ಲಿ ಹಿತಾಸಕ್ತಿಯನ್ನು ಹೊಂದಿರುವ ವ್ಯಕ್ತಿಯು ಅನುಭವಿಸಿದ ಹಾನಿ ಯಾವುದಾದರೂ ಇದ್ದರೆ, ಅದು;

(5) ಆ ಭೂಮಿಯನ್ನು ಅವನಿಂದ ಸ್ವಾಧೀನ ತೆಗೆದುಕೊಳ್ಳುವ ಕಾಲದಲ್ಲಿ ಅವನ ಇತರ ಚರ ಅಥವಾ ಸ್ಥಿರ ಸ್ವತ್ತಿಗೆ ಯಾವುದೇ ರೀತಿಯಲ್ಲಿ ಅಥವಾ ಅವನ ಗಳಿಕೆಗಳಿಗೆ ಆರ್ಜನೆಯು ಹಾನಿಕರವಾಗಿ ಬಾಧಕ ಉಂಟು ಮಾಡಿದ ಕಾರಣದಿಂದಾಗಿ ಹಿತಾಸಕ್ತಿಯನ್ನು ಹೊಂದಿರುವ ವ್ಯಕ್ತಿಯು ಅನುಭವಿಸಿದ ಹಾನಿ ಯಾವುದಾದರೂ ಇದ್ದರೆ, ಅದು;

(6) ಆ ಭೂಮಿಯ ಆರ್ಜನೆಯ ಪರಿಣಾಮವಾಗಿ ಹಿತಾಸಕ್ತಿಯನ್ನು ಹೊಂದಿರುವ ವ್ಯಕ್ತಿಯು ಅವನ ನಿವಾಸ ಅಥವಾ ವ್ಯವಹಾರದ ಸ್ಥಳವನ್ನು ಬದಲಾಯಿಸಲೇಬೇಕಾಗಿದ್ದರೆ, ಅಂಥ ಬದಲಾವಣೆಗೆ ಅವನು ಪ್ರಾಸಂಗಿಕವಾಗಿ ಮಾಡಿದ ಯುಕ್ತ ವೆಚ್ಚಗಳು ಯಾವುವಾದರೂ ಇದ್ದರೆ, ಅವು.

[1][(2) ಉಪಪ್ರಕರಣ (1)ರಲ್ಲಿ ಉಪಬಂಧಿಸಿರುವಂತೆ ಆ ಭೂಮಿಯ ಮಾರುಕಟ್ಟೆ ಮೌಲ್ಯದ ಜೊತೆಗೆ, ನ್ಯಾಯಾಲಯವು ಪ್ರತಿಯೊಂದು ಪ್ರಕರಣದಲ್ಲಿ ಆ ಆರ್ಜನೆಯ ಕಡ್ಡಾಯ ಸ್ವರೂಪವನ್ನು ಗಮನಿಸಿ ಅಂಥ ಮಾರುಕಟ್ಟೆ ಮೌಲ್ಯದ ಮೇಲೆ [2][ಶೇಕಡಾ ಮೂವತ್ತರಷ್ಟು][2] ಮೊತ್ತಕ್ಕೆ ಐತೀರ್ಪು ನೀಡತಕ್ಕದ್ದು.][1]

1. 1991ರ ಅಧಿನಿಯಮ ಸಂ.14ರ ಮೂಲಕ 26-3-1964 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 2005ರ ಅಧಿನಿಯಮ ಸಂ.1ರ ಮೂಲಕ 14-2-2005 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(3) ಮೇಲೆ ಉಪಬಂಧಿಸಿದ ಭೂಮಿಯ ಮಾರುಕಟ್ಟೆ ಮೌಲ್ಯದ ಜೊತೆಗೆ ನ್ಯಾಯಾಲಯವು ಪ್ರತಿಯೊಂದು ಪ್ರಕರಣದಲ್ಲಿ, 4ನೇ ಪ್ರಕರಣದ (1)ನೇ ಉಪ ಪ್ರಕರಣದ ಮೇರೆಗೆ ಅಧಿಸೂಚನೆಯನ್ನು ಪ್ರಕಟಿಸಿದ ದಿನಾಂಕದಿಂದ ಜಿಲ್ಲಾಧಿಕಾರಿಯ ಐತೀರ್ಪಿನ ದಿನಾಂಕ ಅಥವಾ ಭೂಮಿಯನ್ನು ಸ್ವಾಧೀನಕ್ಕೆ ತೆಗೆದುಕೊಂಡ ದಿನಾಂಕ ಇವೆರಡರಲ್ಲಿ ಯಾವುದು ಮೊದಲೋ ಆ ದಿನಾಂಕದವರೆಗಿನ ಅವಧಿಗೆ ಅಂಥ ಮಾರುಕಟ್ಟೆ ಮೌಲ್ಯದ ಮೇಲೆ, ಪ್ರತಿವರ್ಷಕ್ಕೆ ಶೇಕಡಾ ಹನ್ನೆರಡರ ದರದಲ್ಲಿ ಲೆಕ್ಕ ಹಾಕಿದ ಮೊತ್ತಕ್ಕೆ ಐತೀರ್ಪು ನೀಡತಕ್ಕದ್ದು.

**ವಿವರಣೆ.–** ಈ ಉಪ ಪ್ರಕರಣದಲ್ಲಿ ಉಲ್ಲೇಖಿಸಿದ ಅವಧಿಯನ್ನು ಲೆಕ್ಕಹಾಕುವಾಗ, ಯಾವುದೇ ನ್ಯಾಯಾಲಯದ ಯಾವುದೇ ತಡೆಯಾಜ್ಞೆಯ ಅಥವಾ ನಿರ್ಬಂಧಕಾಜ್ಞೆಯ ಕಾರಣದಿಂದ ಯಾವ ಅವಧಿ ಅಥವಾ ಅವಧಿಗಳಲ್ಲಿ ಭೂಮಿಯ ಆರ್ಜನೆಯ ವ್ಯವಹರಣೆಗಳನ್ನು ಆದೇಶದ ಮೂಲಕ ತಡೆಹಿಡಿಯಲಾಗಿತ್ತೋ ಆ ಯಾವುದೇ ಅವಧಿ ಅಥವಾ ಅವಧಿಗಳನ್ನು ಹೊರತುಪಡಿಸತಕ್ಕದ್ದು."][1]

1. 2005ರ ಅಧಿನಿಯಮ ಸಂಖ್ಯೆ 1ರ ಮೂಲಕ ಉಪಪ್ರಕರಣ (3)ನ್ನೂ ದಿನಾಂಕ 14-2-2005ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ಬಿ) ಭೂಆರ್ಜನಾ ಅಧಿನಿಯಮ, 1894ರ 24ನೇ ಪ್ರಕರಣಕ್ಕೆ ಬದಲಾಗಿ ಈ ಕೆಳಕಂಡದ್ದನ್ನು ಸೇರಿಸತಕ್ಕದ್ದು ಎಂದರೆ;–

**"24. ನಷ್ಟ ಪರಿಹಾರವನ್ನು ನಿರ್ಧರಿಸುವಲ್ಲಿ ನಿರ್ಲಕ್ಷಿಸಬೇಕಾದ ವಿಷಯಗಳು:–** ನ್ಯಾಯಾಲಯವು ಈ ಕೆಳಕಂಡವುಗಳನ್ನು ಪರಿಗಣನೆಗೆ ತೆಗೆದುಕೊಳ್ಳತಕ್ಕದ್ದಲ್ಲ,–

(1) ಆರ್ಜನೆಗೆ ಕಾರಣವಾದಂಥ ಜರೂರತೆಯ ಪ್ರಮಾಣ;

(2) ಹಿತಾಸಕ್ತಿಯನ್ನು ಹೊಂದಿರುವ ವ್ಯಕ್ತಿಗೆ ಆರ್ಜಿಸಿದ ಭೂಮಿಯನ್ನು ಬಿಟ್ಟುಕೊಡಲು ಯಾವುದೇ ಇಚ್ಛೆ ಇಲ್ಲದಿರುವುದು;

(3) ಯಾವ ಹಾನಿಯನ್ನು ವ್ಯಕ್ತಿಯು ಉಂಟು ಮಾಡಿದರೆ ಅಂಥ ವ್ಯಕ್ತಿಯನ್ನು ದಾವೆಗೆ ಅದು ಗುರಿಪಡಿಸುವುದಿಲ್ಲವೋ ಅವನು ಅನುಭವಿಸಿದ ಆ ಯಾವುದೇ ಹಾನಿ;

(4) ಪ್ರಕರಣ 6ರ ಮೇರೆಗಿನ ಘೋಷಣೆಯನ್ನು ಪ್ರಕಟಿಸಿದ ದಿನಾಂಕದ ತರುವಾಯ ಯಾವ ಬಳಕೆಗೆ ಅದನ್ನು ಬಳಸಲಾಗುವುದೋ ಆ ಬಳಕೆಯಿಂದ ಅಥವಾ ಅದರ ಪರಿಣಾಮವಾಗಿ ಆರ್ಜಿಸಿದ ಭೂಮಿಗೆ ಉಂಟಾಗುವ ಸಂಭವವಿರುವಂಥ ಯಾವುದೇ ಹಾನಿ;

(5) ಆರ್ಜಿಸಿದಾಗ ಯಾವ ಬಳಕೆಗೆ ಅದನ್ನು ಬಳಸಲಾಗುವುದೋ ಆ ಬಳಕೆಯಿಂದ ಪ್ರಾಪ್ತವಾಗುವ ಸಂಭವವಿರುವ ಆರ್ಜಿಸಿದ ಭೂಮಿಯ ಮೌಲ್ಯದಲ್ಲಿ ಯಾವುದೇ ಹೆಚ್ಚಳ;

(6) ಆರ್ಜಿಸಿದ ಭೂಮಿಯನ್ನು ಯಾವ ಬಳಕೆಗೆ ಬಳಸಲಾಗುವುದೋ ಆ ಬಳಕೆಯಿಂದ ಪ್ರಾಪ್ತವಾಗುವ ಸಂಭವವಿರುವ ಹಿತಾಸಕ್ತಿಯನ್ನು ಹೊಂದಿರುವ ವ್ಯಕ್ತಿಯ ಇತರ ಭೂಮಿಯ ಮೌಲ್ಯದ ಬಗ್ಗೆ ಯಾವುದೇ ಹೆಚ್ಚಳ;

(7) ಪ್ರಕರಣ 6ರ ಮೇರೆಗಿನ ಅಧಿಸೂಚನೆಯನ್ನು ಪ್ರಕಟಿಸಿದ ದಿನಾಂಕದ ತರುವಾಯ, ಆರ್ಜಿಸಿದ ಭೂಮಿಯ ಮೇಲೆ ಅಥವಾ ವಿಲೆಗಾಗಿ ಸ್ಥಳೀಯ ಪ್ರಾಧಿಕಾರದ ಮಂಜೂರಾತಿಯೊಂದಿಗೆ ಪ್ರಾರಂಭಿಸಿದ, ಮಾಡಿದ ಅಥವಾ ಕೈಗೊಂಡ ಯಾವುದೇ ವೆಚ್ಚ ಅಥವಾ ಮೇಲ್ಪಾಟುಗಳು;

(8) ಯಾವುದೇ ಕಾನೂನಿನ ಅನುಸರಣೆಯಲ್ಲಿ ಯಾವ ಉದ್ದೇಶಕ್ಕಾಗಿ ಆ ಭೂಮಿಯನ್ನು ಬಳಸಬಹುದೋ ಅಥವಾ ಯಾವ ಉದ್ದೇಶಕ್ಕಾಗಿ ಸ್ಥಳೀಯ ಪ್ರಾಧಿಕಾರದ ವಿಶೇಷ ಅವಶ್ಯಕತೆಗಳ ಹೊರತಾಗಿ ಯಾವುದೇ ಮಾರುಕಟ್ಟೆ ಇಲ್ಲವೋ ಆ ಉದ್ದೇಶಕ್ಕಾಗಿ ಇದ್ದರೆ, ಆ ಯಾವುದೇ ಉದ್ದೇಶಕ್ಕಾಗಿ ಭೂಮಿಯ ವಿಶೇಷ ಸೂಕ್ತತೆ ಅಥವಾ ಹೊಂದಿಕೆ;

(9) ಯಾವ ಭೂಮಿಯ ಅಥವಾ ಅದರ ಮೇಲಿನ ಯಾವುದೇ ಆವರಣಗಳ ಬಳಕೆಯನ್ನು ಯಾವುದೇ ನ್ಯಾಯಾಲಯವು ಯಾವ ರೀತಿಯಲ್ಲಿ ನಿರ್ಬಂಧಿಸಬಹುದೋ ಅಥವಾ ಆ ಬಳಕೆಯು ಕಾನೂನಿಗೆ ವಿರುದ್ಧವಾಗಿರುವುದೋ ಅಥವಾ ಆವರಣಗಳ ನಿವಾಸಿಗಳ ಆರೋಗ್ಯಕ್ಕೆ ಅಥವಾ ಸಾರ್ವಜನಿಕರ ಆರೋಗ್ಯಕ್ಕೆ ಹಾನಿಕರವಾಗಿದೆಯೋ ಆ ಬಳಕೆಯ ಕಾರಣದಿಂದ ಭೂಮಿಯ ಮೌಲ್ಯದಲ್ಲಿ ಯಾವುದೇ ಹೆಚ್ಚಳ."

## ಅಧ್ಯಾಯ – X

## ಅಪರಾಧಗಳು ಮತ್ತು ದಂಡನೆಗಳು, ನಿಯಮಗಳು ಮತ್ತು ಉಪವಿಧಿಗಳು

**73. ಅಪರಾಧಗಳು ಮತ್ತು ದಂಡನೆಗಳು:–** ಯಾರೇ ಆಗಲಿ,–

(ಎ) 14ನೇ ಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸಿ ಯಾವುದೇ ಕೆಲಸವನ್ನು ಮಾಡಿದರೆ;

[1][(ಬಿ) XXX][1]

1. 2005ರ ಅಧಿನಿಯಮ ಸಂಖ್ಯೆ 1ರ ಮೂಲಕ 14-2-2005ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(ಸಿ) 15ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ನೀಡಿದ ಪ್ರಾರಂಭ ಪ್ರಮಾಣ ಪತ್ರದ [1][***][1] ಅಥವಾ 17ನೇ ಪ್ರಕರಣದ (2) ನೇ ಉಪಪ್ರಕರಣದ ಮೇರೆಗೆ ನೀಡಿದ ಮಂಜೂರಾತಿಯ ಷರತ್ತುಗಳನ್ನು ಉಲ್ಲಂಘಿಸಿದರೆ;

1. 2005ರ ಅಧಿನಿಯಮ ಸಂಖ್ಯೆ 1ರ ಮೂಲಕ 14-2-2005ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(ಡಿ) 15ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ, ಪ್ರಾರಂಭ ಪ್ರಮಾಣ ಪತ್ರವನ್ನು ನೀಡಲು [1][***][1] ಅಥವಾ 17ನೇ ಪ್ರಕರಣದ (2)ನೇ ಉಪ್ರಕರಣದ ಮೇರೆಗೆ ಮಂಜೂರಾತಿಯನ್ನು ನೀಡಲು ನಿರಾಕರಿಸಿದ್ದಾಗ್ಯೂ ಯಾವುದೇ ಕೆಲಸವನ್ನು ಮಾಡಿದರೆ;

1. 2005ರ ಅಧಿನಿಯಮ ಸಂಖ್ಯೆ 1ರ ಮೂಲಕ 14-2-2005ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][(ಡಿ-1) [2][11ನೇ ಅಥವಾ 27ನೇ ಪ್ರಕರಣದ][2] ಮೇರೆಗೆ ಯಾವುದೇ ಭೂಮಿಯ ಮೇಲೆ ಯಾರೇ ವ್ಯಕ್ತಿಯ ಪ್ರವೇಶಕ್ಕೆ ಅಡ್ಡಿಯುಂಟು ಮಾಡಿದರೆ ಅಥವಾ ಸದರಿ ಪ್ರಕರಣಕ್ಕನುಸಾರವಾಗಿ ಯಾವುದೇ ಕೆಲಸವನ್ನು ಮಾಡಲು ಅಂಥ ವ್ಯಕ್ತಿಯನ್ನು ತಡೆಗಟ್ಟಿದರೆ;][1]

1. 1964 ಅಧಿನಿಯಮ ಸಂ. 14ರ ಮೂಲಕ 26-3-1964 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

2. 2005ರ ಅಧಿನಿಯಮ ಸಂ. 1ರ ಮೂಲಕ 14-2-2005ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಇ) 35ನೇ ಪ್ರಕರಣದ (1)ನೇ ಉಪಪ್ರಕರಣದ (ಎ) ಅಥವಾ (ಬಿ) ಖಂಡವನ್ನು ಉಲ್ಲಂಘಿಸಿ ಯಾವುದೇ ಕೆಲಸವನ್ನು ಮಾಡಿದರೆ – ಅವನು ಅಪರಾಧ ನಿರ್ಣಯವಾದ ಮೇಲೆ [1][ಮೂರು ತಿಂಗಳವರೆಗೆ ವಿಸ್ತರಿಸಬಹುದಾದಂಥ ಅವಧಿಯ ಕಾರಾವಾಸದಿಂದ ಅಥವಾ ಐದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ][1] ದಂಡಿತನಾಗತಕ್ಕದ್ದು ಮತ್ತು ಆ ನ್ಯಾಯಾಲಯವು, ಅಪರಾಧ ನಿರ್ಣಯದ ಅಂಥ ಆದೇಶದಲ್ಲಿ, ಅಂಥ ಉಲ್ಲಂಘನೆಯು ಅಪರಾಧ ನಿರ್ಣಯದ ಆದೇಶದ ದಿನಾಂಕದ ತರುವಾಯ ಮುಂದುವರೆದರೆ, ಆ ಉಲ್ಲಂಘನೆಯು ಯಾವ ಅವಧಿಯಿಂದ ಮುಂದುವರಿಯಿತೋ ಆ ಅವಧಿಗೆ ಪ್ರತಿ ದಿವಸಕ್ಕೆ [1][ಇನ್ನೂರ ಐವತ್ತು ರೂಪಾಯಿಗಳನ್ನು][1] ಮೀರದ ಜುಲ್ಮಾನೆಯನ್ನು ಹಾಗೆ ಅಪರಾಧಿಯೆಂದು ನಿರ್ಣೀತನಾದ ವ್ಯಕ್ತಿಯಿಂದ ವಸೂಲು ಮಾಡತಕ್ಕದ್ದೆಂದು ನಿರ್ದೇಶಿತಕ್ಕದ್ದು:

1. 1991ರ ಅಧಿನಿಯಮ ಸಂ.17ರ ಪ್ರಕರಣ 13ರ ಮೂಲಕ 19-4-1991 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಪರಂತು, ಆ ನ್ಯಾಯಾಲಯದ ತೀರ್ಪಿನಲ್ಲಿ ನಮೂದಿಸಬೇಕಾದ ತದ್ವಿರುದ್ಧವಾದ ವಿಶೇಷ ಮತ್ತು ಸಾಕಷ್ಟು ಕಾರಣಗಳಿಲ್ಲದಿರುವಾಗ, ಆ ಜುಲ್ಮಾನೆಯು [1][ಐದು ನೂರು ರೂಪಾಯಿ] ಗಳಿಗಿಂತ ಕಡಿಮೆ ಇರತಕ್ಕದ್ದಲ್ಲ ಮತ್ತು ಆ ಉಪಬಂಧಗಳ ಉಲ್ಲಂಘನೆಯು ಮುಂದುವರೆಯುವ ಸಂದರ್ಭದಲ್ಲಿ ಆ ಜುಲ್ಮಾನೆಯು ಪ್ರತಿ ದಿವಸಕ್ಕೆ [1][ಇಪ್ಪತ್ತೈದು ರೂಪಾಯಿ][1] ಗಳಿಗಿಂತ ಕಡಿಮೆ ಇರತಕ್ಕದ್ದಲ್ಲ.

1. 1991ರ ಅಧಿನಿಯಮ ಸಂ.17ರ ಮೂಲಕ 19-4-1991 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**74. ನಿಯಮಗಳು:-** (1) ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ ಮತ್ತು ಪೂರ್ವ ಪ್ರಕಟಣೆಯ ತರುವಾಯ, ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸಲು ನಿಯಮಗಳನ್ನು ರಚಿಸಬಹುದು.

(2) ವಿಶೇಷವಾಗಿ ಮತ್ತು ಹಿಂದೆ ಹೇಳಿದ ಅಧಿಕಾರದ ಸಾಮಾನ್ಯ ಅನ್ವಯಕ್ಕೆ ಬಾಧಕವಾಗದಂತೆ ಈ ಕೆಳಕಂಡ ವಿಷಯಗಳನ್ನು ನಿರ್ಧರಿಸಲು ಅಂಥ ನಿಯಮಗಳನ್ನು ರಚಿಸಬಹುದು,-

[1][(ಎ) 4ಸಿ ಪ್ರಕರಣದ ಮೇರೆಗೆ ರಚಿತವಾದ ಮಂಡಲಿಯ ಮತ್ತು ಯೋಜನಾ ಪ್ರಾಧಿಕಾರಗಳ ಪ್ರಕಾರ್ಯಗಳು ಮತ್ತು ಅಧಿಕಾರಗಳು;

(ಎ-1) 4ಸಿ ಪ್ರಕರಣದ ಮೇರೆಗೆ ರಚಿತವಾದ ಮಂಡಲಿಗೆ ಮತ್ತು ಯೋಜನಾ ಪ್ರಾಧಿಕಾರಗಳಿಗೆ ಸದಸ್ಯರಾಗಿ ಆಯ್ಕೆಯಾಗುವುದಕ್ಕಾಗಿ ಮತ್ತು ಸದಸ್ಯರಾಗುವುದಕ್ಕಾಗಿ ಅರ್ಹತೆಗಳು ಮತ್ತು ಅನರ್ಹತೆಗಳು;

(ಎ-2) 4ಸಿ ಪ್ರಕರಣದ (3)ನೇ ಉಪ್ರಕರಣದ (iii)ನೇ ಖಂಡದ ಮೇರೆಗೆ ಸ್ಥಳೀಯ ಪ್ರಾಧಿಕಾರಗಳ ಪ್ರತಿನಿಧಿಗಳನ್ನು ನಾಮನಿರ್ದೇಶನ ಮಾಡುವ ರೀತಿ;

(ಎ-3) ಯಾವ ರೀತಿಯಲ್ಲಿ ಮತ್ತು ಯಾವ ಉದ್ದೇಶಗಳಿಗಾಗಿ ಯಾವುದೇ ಯೋಜನಾ ಪ್ರಾಧಿಕಾರವು 4ಎಫ್ ಪ್ರಕರಣದ ಮೇರೆಗೆ ಯಾರೇ ವ್ಯಕ್ತಿಯನ್ನು ತನ್ನೊಂದಿಗೆ ಸೇರಿಸಿಕೊಳ್ಳಬಹುದೋ ಆ ರೀತಿ ಮತ್ತು ಉದ್ದೇಶಗಳು][1];

1. 1964ರ ಅಧಿನಿಯಮ ಸಂ.14ರ, ಮೂಲಕ 26.3.1964 ರಿಂದ ಜಾರಿಗೆ ಬರುವಂತೆ ಖಂಡ (ಎ) ಯಿಂದ (ಎ3) ವರೆಗೆ ಸೇರಿಸಲಾಗಿದೆ.

[1][(ಎ-4)] 6ನೇ ಪ್ರಕರಣದ ಮೇರೆಗೆ ನಕಾಶೆಯಲ್ಲಿ ತೋರಿಸಬೇಕಾದ ವಿವರಗಳು;

1. 1964ರ ಅಧಿನಿಯಮ ಸಂ. 14ರ ಮೂಲಕ 26.3.1964 ರಿಂದ ಜಾರಿಗೆ ಬರುವಂತೆ ಪುನರ್ ಅಂಕಿತಗೊಳಿಸಲಾಗಿದೆ.

(ಬಿ) 7ನೇ ಪ್ರಕರಣದ (2)ನೇ ಉಪಪ್ರಕರಣದ ಮೇರೆಗೆ ವಿಚಾರಣೆಯನ್ನು ನಡೆಸುವ ರೀತಿ ಮತ್ತು ಅನುಸರಿಸಬೇಕಾದ ಪ್ರಕ್ರಿಯೆ;

(ಸಿ) 9ನೇ ಪ್ರಕರಣದ (1)ನೇ ಉಪಪ್ರಕರಣದ ಅಥವಾ (2)ನೇ ಉಪಪ್ರಕರಣದ ಮೇರೆಗೆ ಅಥವಾ 13ನೇ ಪ್ರಕರಣದ (4)ನೇ ಉಪಪ್ರಕರಣದ ಮೇರೆಗೆ ಸ್ಥೂಲ ಅಭಿವೃದ್ಧಿ ಯೋಜನೆಯನ್ನು ಪ್ರಕಟಿಸುವ ರೀತಿ;

(ಡಿ) 11ನೇ ಪ್ರಕರಣದ, [1][XXX][1] ಅಥವಾ 27ನೇ ಪ್ರಕರಣದ ಮೇರೆಗೆ ಕೊಡಬೇಕಾದ ನೋಟೀಸುಗಳು;

1. 2005ರ ಅಧಿನಿಯಮ ಸಂ. 1ರ ಮೂಲಕ 14-2-2005ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(ಇ) 15ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ನೀಡಬೇಕಾದ ಪ್ರಾರಂಭ ಪ್ರಮಾಣಪತ್ರದ ನಮೂನೆ;

(ಎಫ್) (1)ನೇ ಉಪಪ್ರಕರಣದ ಮೇರೆಗೆ ವಿನ್ಯಾಸ ನಕ್ಷೆಯನ್ನು ಒಪ್ಪಿಸುವ ವ್ಯಕ್ತಿಯು ಒದಗಿಸಬೇಕಾದ ವಿವರಗಳು,(2)ನೇ ಉಪಪ್ರಕರಣದ ಮೇರೆಗೆ ಯೋಜನಾ ಪ್ರಾಧಿಕಾರವು ಯಾವ ಅವಧಿಯೊಳಗೆ ಅಂಥ ಯೋಜನೆಯನ್ನು ಮಂಜೂರು ಮಾಡಬಹುದೋ ಆ ಅವಧಿ ಮತ್ತು 17ನೇ ಪ್ರಕರಣದ (4)ನೇ ಉಪಪ್ರಕರಣದ ಮೇರೆಗೆ ವಿಚಾರಣೆಯನ್ನು ನಡೆಸುವ ರೀತಿ;

(ಜಿ) 18ನೇ ಪ್ರಕರಣದ ಮೇರೆಗೆ ವಿಧಿಸಬೇಕಾದ ಪುರೋಭಿವೃದ್ಧಿ ಫೀಜು ಮತ್ತು ಅದನ್ನು ವಿಧಿಸುವ ರೀತಿ;

[1][(ಹೆಚ್) XXX][1]

[1][(ಐ) XXX][1]

1. 2005ರ ಅಧಿನಿಯಮ ಸಂ. 1ರ ಮೂಲಕ 14-2-2005ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(ಜೆ) 29ನೇ ಪ್ರಕರಣದ (2)ನೇ ಉಪಪ್ರಕರಣದ ಮೇರೆಗೆ ಕಾರ್ಯಯೋಜನೆಯನ್ನು ರೂಪಿಸುವ ಉದ್ದೇಶದ ಬಗ್ಗೆ ಘೋಷಣೆಯನ್ನು ಪ್ರಕಟಿಸುವ ರೀತಿ;

(ಕೆ) 30ನೇ ಪ್ರಕರಣದ ಮೇರೆಗೆ ಕರಡು ಕಾರ್ಯಯೋಜನೆಯನ್ನು ಪ್ರಕಟಿಸುವ ರೀತಿ;

(ಎಲ್) 32ನೇ ಪ್ರಕರಣದ (ಜಿ) ಖಂಡದ ಮೇರೆಗೆ ಆ ಕರಡು ಕಾರ್ಯಯೋಜನೆಯಲ್ಲಿ ಸೇರಿಸಬೇಕಾದ ಇನ್ನೂ ಹೆಚ್ಚಿನ ವಿವರಗಳು;

(ಎಂ) 35ನೇ ಪ್ರಕರಣದ (1)ನೇ ಉಪಪ್ರಕರಣದ (ಎ) ಖಂಡದ ಮೇರೆಗೆ ನೀಡಬೇಕಾದ ಪ್ರಾರಂಭ ಪ್ರಮಾಣ ಪತ್ರದ ನಮೂನೆ ಮತ್ತು ಅದರಲ್ಲಿ ಸೇರಿಸಬೇಕಾದ ಷರತ್ತುಗಳು ಯಾವುದಾದರೂ ಇದ್ದರೆ, ಅವುಗಳು;

(ಎನ್) 35ನೇ ಪ್ರಕರಣದ (1)ನೇ ಉಪಪ್ರಕರಣದ (ಸಿ) ಖಂಡದ ಮೇರೆಗೆ ವಿಚಾರಣೆಯನ್ನು ನಡೆಸುವಲ್ಲಿ ಅನುಸರಿಸಬೇಕಾದ ಪ್ರಕ್ರಿಯೆ;

(ಒ) ಯಾವ ರೀತಿಯಲ್ಲಿ ಮತ್ತು ಯಾವ ವಿಧಾನಕ್ಕನುಸಾರವಾಗಿ 35ನೇ ಪ್ರಕರಣದ (2)ನೇ ಉಪಪ್ರಕರಣದ ಮೇರೆಗೆ ನಷ್ಟ ಪರಿಹಾರವನ್ನು ಸಂದಾಯ ಮಾಡತಕ್ಕದ್ದೋ ಆ ರೀತಿ ಮತ್ತು ಆ ವಿಧಾನ;

(ಪಿ) ಪಟ್ಟಣ ಯೋಜನಾ ನಿರ್ದೇಶಕನೆಂದು ಮತ್ತು ಪಟ್ಟಣ ಯೋಜನಾ ಅಧಿಕಾರಿ ಎಂದು ನೇಮಕ ಮಾಡಬೇಕಾದ ವ್ಯಕ್ತಿಗಳ ಅರ್ಹತೆಗಳು;

(ಕ್ಯೂ) 38ನೇ ಪ್ರಕರಣದ (1)ನೇ ಉಪಪ್ರಕರಣದ ಹಲವಾರು ಖಂಡಗಳ ಪೈಕಿ ಯಾವುದೇ ಖಂಡದ ಮೇರೆಗೆ ಆದೇಶಗಳನ್ನು ಮಾಡುವಲ್ಲಿ ಪಟ್ಟಣಯೋಜನಾ ಅಧಿಕಾರಿಯು ಅನುಸರಿಸಬೇಕಾದ ಪ್ರಕ್ರಿಯೆ;

(ಆರ್) ಯಾವ ನಮೂನೆಯಲ್ಲಿ ಪಟ್ಟಣ ಯೋಜನಾ ಅಧಿಕಾರಿಯು 38ನೇ ಪ್ರಕರಣದ (1)ನೇ ಉಪಪ್ರಕರಣದ (ಎನ್) ಖಂಡದ ಮೇರೆಗೆ, ಅಂತಿಮ ಕಾರ್ಯಯೋಜನೆಯನ್ನು ರೂಪಿಸಬೇಕೋ ಆ ನಮೂನೆ;

(ಎಸ್) 42ನೇ ಪ್ರಕರಣದ ಮೇರೆಗೆ ಒಡೆತನದ ಬಗ್ಗೆ ವಿವಾದಿತ ಕ್ಲೇಮನ್ನು ತೀರ್ಮಾನಿಸುವ ಉದ್ದೇಶಕ್ಕಾಗಿ ವಿಚಾರಣೆಯನ್ನು ನಡೆಸಲು ನೇಮಕಗೊಂಡ ಅಧಿಕಾರಿಯು ಅನುಸರಿಸಬೇಕಾದ ಪ್ರಕ್ರಿಯೆ;

(ಟಿ) 43ನೇ ಪ್ರಕರಣದ ಮೇರೆಗೆ ಪ್ರಾರಂಭಿಕ ಕಾರ್ಯಯೋಜನೆಯನ್ನು ಸಿದ್ಧಪಡಿಸುವ ರೀತಿ;

(ಯು) 44ನೇ ಪ್ರಕರಣದ ಮೇರೆಗೆ ನೋಟೀಸನ್ನು ನೀಡುವ ರೀತಿ;

(ವಿ) 46ನೇ ಪ್ರಕರಣದ ಮೇರೆಗೆ ಒಬ್ಬ ವ್ಯಕ್ತಿಯನ್ನು ಕ್ಷಿಪ್ರವಾಗಿ ಹೊರ ಹಾಕುವಲ್ಲಿ ಅನುಸರಿಸಬೇಕಾದ ಪ್ರಕ್ರಿಯೆ;

(ಡಬ್ಲ್ಯೂ) 47ನೇ ಪ್ರಕರಣದ ಮೇರೆಗೆ ಕ್ರಮವನ್ನು ಕೈಗೊಳ್ಳುವುದಕ್ಕೆ ಮುಂಚೆ ನೀಡಬೇಕಾದ ನೋಟೀಸು;

(ಎಕ್ಸ್) (2)ನೇ ಉಪಪ್ರಕರಣದ ಮೇರೆಗೆ ಕರಡಿನಲ್ಲಿ ಮಾಡಿದ ವ್ಯತ್ಯಾಸವನ್ನು ಪ್ರಕಟಿಸುವ ರೀತಿ ಮತ್ತು 48ನೇ ಪ್ರಕರಣದ (3)ನೇ ಉಪಪ್ರಕರಣದ ಮೇರೆಗೆ ಕರಡಿನಲ್ಲಿ ಮಾಡಿದ ವ್ಯತ್ಯಾಸವು ಒಳಗೊಂಡಿರಬೇಕಾದ ವಿವರಗಳು;

(ವೈ) 51ನೇ ಪ್ರಕರಣದ (2)ನೇ ಉಪಪ್ರಕರಣದ ಮೇರೆಗೆ ಹಲವಾರು ಯೋಜನಾ ಪ್ರಾಧಿಕಾರಗಳ ಪ್ರತಿನಿಧಿಗಳನ್ನು ಚುನಾಯಿಸುವ ರೀತಿ;

(ಝಡ್) 60ನೇ ಪ್ರಕರಣದ ಮೇರೆಗೆ ನಷ್ಟಪರಿಹಾರದ ಬಗ್ಗೆ ಕ್ಲೇಮು ಮಾಡುವುದಕ್ಕಾಗಿ ಅನುಮತಿಸಬೇಕಾದ ಕಾಲ;

(ಎಎ) 63ನೇ ಪ್ರಕರಣದ ಮೇರೆಗೆ ಯೋಜನಾ ಪ್ರಾಧಿಕಾರಕ್ಕೆ ಯಾವ ಅವಧಿಯೊಳಗೆ ಸಂದಾಯವನ್ನು ಮಾಡಬೇಕೋ ಆ ಅವಧಿ;

[1][(ಎಎ-1) ಯೋಜನಾ ಪ್ರಾಧಿಕಾರಗಳ ಆಯವ್ಯಯ ಪತ್ರದ ನಮೂನೆ, ಅದನ್ನು ಯಾವ ದಿನಾಂಕದಂದು ಅಥವಾ ಯಾವ ದಿನಾಂಕಕ್ಕೆ ಮುಂಚೆ ತಯಾರಿಸತಕ್ಕದ್ದೋ ಅದನ್ನು ತಯಾರಿಸುವ ರೀತಿ ಮತ್ತು ಮಂಡಳಿಗೆ ಮತ್ತು ರಾಜ್ಯ ಸರ್ಕಾರಕ್ಕೆ ಕಳುಹಿಸಿಕೊಡಬೇಕಾದ ಪ್ರತಿಗಳ ಸಂಖ್ಯೆ;

(ಎಎ-2) 68ಸಿ ಪ್ರಕರಣದ ಮೇರೆಗೆ ಲೆಕ್ಕಪತ್ರಗಳ ವಾರ್ಷಿಕ ವಿವರಪತ್ರದ ಮತ್ತು ಜಮಾಖರ್ಚು ಪಟ್ಟಿಗಳ ನಮೂನೆ;

(ಎಎ-3) ಯೋಜನಾ ಪ್ರಾಧಿಕಾರಗಳ ವಾರ್ಷಿಕ ವರದಿಯ ನಮೂನೆ ಮತ್ತು ಅವುಗಳನ್ನು 68ಡಿ ಪ್ರಕರಣದ ಮೇರೆಗೆ ಯಾವ ದಿನಾಂಕಗಳಂದು ಅಥವಾ ಯಾವ ದಿನಾಂಕಕ್ಕೆ ಮುಂಚೆ ಒಪ್ಪಿಸತಕ್ಕದ್ದೋ ಆ ದಿನಾಂಕಗಳು;][1]

1. 1964ರ ಅಧಿನಿಯಮ ಸಂ.14ರ ಮೂಲಕ 26.3.1964 ರಿಂದ ಜಾರಿಗೆ ಬರುವಂತೆ (ಎಎ1) ರಿಂದ (ಎಎ3) ರವರೆಗಿನ ಖಂಡಗಳನ್ನು ಸೇರಿಸಲಾಗಿದೆ.

(ಬಿಬಿ) 77ನೇ ಪ್ರಕರಣದ ಪರಂತುಕದ ಮೇರೆಗೆ ಸಾರ್ವಜನಿಕರಿಗೆ ಯಾವ ರೀತಿಯಲ್ಲಿ ದಸ್ತಾವೇಜುಗಳು, ನಕ್ಷೆಗಳು, ನಕಾಶೆಗಳು ದೊರೆಯುವಂತೆ ಮಾಡತಕ್ಕದ್ದೋ ಆ ರೀತಿ;

(ಸಿಸಿ) ಸಮ್ಮೇಳನಗಳು ಮತ್ತು ವಿಹಿತವಾಗಬಹುದಾದಂಥ ಇತರ ಸಾಧನಗಳ ಮೂಲಕ ವ್ಯವಹರಣೆಗಳ ಪ್ರತಿಯೊಂದು ಹಂತದಲ್ಲಿ ಪಟ್ಟಣ ಕಾರ್ಯಯೋಜನೆಯಲ್ಲಿ ಸೇರಿಸಬೇಕೆಂದು ಉದ್ದೇಶಿಸಲಾದ ಭೂಮಿಯ ಒಡೆಯರ ಮತ್ತು ಭೂಮಿಯಲ್ಲಿ ಹಿತಾಸಕ್ತಿಯನ್ನು ಹೊಂದಿರುವ ವ್ಯಕ್ತಿಗಳ ಸಹಕಾರವನ್ನು ಪಡೆಯಲು, ಯೋಜನಾ ಪ್ರಾಧಿಕಾರವು ಅಂಗೀಕರಿಸಬೇಕಾದ ಪ್ರಕ್ರಿಯೆ;

(ಡಿಡಿ) ಈ ಅಧಿನಿಯಮದ ಮೇರೆಗೆ ಸಾಮಾನ್ಯವಾಗಿ ಪಟ್ಟಣ ಯೋಜನಾ ಅಧಿಕಾರಿಯು ಅನುಸರಿಸಬೇಕಾದ ಪ್ರಕ್ರಿಯೆ;

(ಇಇ) ಈ ಅಧಿನಿಯಮದ ಮೇರೆಗೆ, ಯೋಜನಾ ಪ್ರಾಧಿಕಾರಗಳ ವ್ಯವಹರಣೆಗಳನ್ನು ಅಂಥ ಪ್ರಾಧಿಕಾರಗಳಿಗೆ ಅನ್ವಯವಾಗಬಹುದಾದ ಯಾವುದೇ ಮುನಿಸಿಪಲ್ ಅಥವಾ ಸ್ಥಳೀಯ ಕಾನೂನು ಎಷ್ಟರ ಮಟ್ಟಿಗೆ ನಿಯಂತ್ರಿಸತಕ್ಕದ್ದೋ ಆ ವ್ಯಾಪ್ತಿ; ಮತ್ತು

[1][(ಇಇ-1) ಯಾವ ದಸ್ತಾವೇಜುಗಳ ಪ್ರತಿಗಳನ್ನು ಕೊಡಬಹುದೋ ಆ ದಸ್ತಾವೇಜುಗಳು ಮತ್ತು ಅಂಥ ದಸ್ತಾವೇಜುಗಳ ಪರಿಶೀಲನೆಗಾಗಿ ಮತ್ತು ಅದರ ಪ್ರತಿಗಳನ್ನು ನೀಡುವುದಕ್ಕಾಗಿ ಸಂದಾಯಮಾಡಬೇಕಾದ ಫೀಜುಗಳು;][1]

1. 1964ರ ಅಧಿನಿಯಮ ಸಂ.14ರ ಮೂಲಕ 26.3.1964 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][(ಎಫ್‌ಎಫ್) ಯಾವ ವಿಷಯದ ಬಗ್ಗೆ ಈ ಅಧಿನಿಯಮದಲ್ಲಿ ಯಾವುದೇ ಉಪಬಂಧವಿಲ್ಲವೋ ಅಥವಾ ಯಾವುದೇ ಸಾಕಷ್ಟು ಉಪಬಂಧವಿಲ್ಲವೋ (ಅಪೀಲುಗಳು, ಅಪೀಲು ಪ್ರಾಧಿಕಾರಗಳು, ಅಪೀಲುಗಳನ್ನು ದಾಖಲು ಮಾಡುವುದಕ್ಕಾಗಿ ಕಾಲ, ಅಪೀಲುಗಳಿಗೆ ಸಂಬಂಧಿಸಿದಂತೆ ಸಂದಾಯ ಮಾಡಬೇಕಾದ ಫೀಜುಗಳ ಮತ್ತು ಇತರ ವಿಷಯಗಳಿಗೆ ಸಂಬಂಧಿಸಿದ ಉಪಬಂಧವನ್ನೊಳಗೊಂಡು) ಮತ್ತು ಯಾವ ವಿಷಯದ ಬಗ್ಗೆ ಈ ಅಧಿನಿಯಮದ ಉದ್ದೇಶಗಳನ್ನು ಜಾರಿಗೊಳಿಸುವುದಕ್ಕಾಗಿ ರಾಜ್ಯ ಸರ್ಕಾರದ ಅಭಿಪ್ರಾಯದಲ್ಲಿ ಉಪಬಂಧವು ಅವಶ್ಯವಾಗಿರುವುದೋ ಆ ಯಾವುದೇ ಇತರ ವಿಷಯ.][1]

1. 1964ರ ಅಧಿನಿಯಮ ಸಂ.14ರ ಮೂಲಕ 26.3.1964 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(3) ಈ ಪ್ರಕರಣದ ಮೇರೆಗೆ ರಚಿಸಿದ ನಿಯಮವು, ಅಂಥ ನಿಯಮದಲ್ಲಿ ನಿರ್ದಿಷ್ಟಪಡಿಸಿರುವಂಥ ನಿಯಮಗಳ ಯಾವುದೇ ಉಪಬಂಧದ ಉಲ್ಲಂಘನೆಯು ಐದು ನೂರು ರೂಪಾಯಿಗಳಿಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ಮತ್ತು ಮುಂದುವರಿಯುತ್ತಿರುವ ಉಲ್ಲಂಘನೆಯ ಸಂದರ್ಭದಲ್ಲಿ ಅಂಥ ಮೊದಲ ಉಲ್ಲಂಘನೆಗಾಗಿ, ಅಪರಾಧವು ನಿರ್ಣಯವಾದ ತರುವಾಯ ಅಂಥ ಉಲ್ಲಂಘನೆಯು ಮುಂದುವರಿಯುತ್ತಿರುವಂಥ ಅವಧಿಯಲ್ಲಿ ಪ್ರತಿಯೊಂದು ದಿವಸಕ್ಕಾಗಿ ಹತ್ತು ರೂಪಾಯಿಗಳಿಗೆ ವಿಸ್ತರಿಸಬಹುದಾದಂಥ ಹೆಚ್ಚಿನ ಜುಲ್ಮಾನೆಯಿಂದ ದಂಡನೀಯವಾಗತಕ್ಕದ್ದೆಂದು ಉಪಬಂಧ ಕಲ್ಪಿಸಬಹುದು.

[1][(3ಎ) ಈ ಅಧಿನಿಯಮದ ಮೇರೆಗಿನ ಯಾವುದೇ ನಿಯಮವನ್ನು ಪೂರ್ವಾನ್ವಯವಾಗಿ ಪರಿಣಾಮಕಾರಿಯಾಗುವಂತೆ ರಚಿಸಬಹುದು ಮತ್ತು ಅಂಥ ಯಾವುದೇ ನಿಯಮವನ್ನು ರಚಿಸುವಾಗ, ಅಂಥ ನಿಯಮವನ್ನು ರಚಿಸುವುದಕ್ಕಾಗಿನ ಕಾರಣಗಳನ್ನು ನಿರ್ದಿಷ್ಟಪಡಿಸುವ ಹೇಳಿಕೆಯನ್ನು (4)ನೇ ಉಪಪ್ರಕರಣದ ಮೇರೆಗೆ ನಿಯಮದೊಂದಿಗೆ ವಿಧಾನ ಮಂಡಲದ ಉಭಯ ಸದನಗಳ ಮುಂದೆ ಇಡತಕ್ಕದ್ದು. ಈ ಅಧಿನಿಯಮದ ಮೇರೆಗೆ ರಚಿಸಿದ ಎಲ್ಲಾ ನಿಯಮಗಳು (4)ನೇ ಉಪಪ್ರಕರಣದ ಮೇರೆಗೆ ಮಾಡಿದ ಯಾವುದೇ ಮಾರ್ಪಾಟಿಗೆ ಒಳಪಟ್ಟು, ಈ ಅಧಿನಿಯಮದಲ್ಲಿ ಅಧಿನಿಯಮಿತವಾಗಿದ್ದಿದ್ದರೆ ಹೇಗೋ ಹಾಗೇ ಪರಿಣಾಮವನ್ನು ಹೊಂದಿರತಕ್ಕದ್ದು.][1]

1. 1964ರ ಅಧಿನಿಯಮ ಸಂಖ್ಯೆ 14ರ ಮೂಲಕ 26–3–1964ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(4) ಈ ಪ್ರಕರಣದ ಮೇರೆಗೆ ರಚಿಸಿದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ, ಆದಷ್ಟು ಬೇಗ ರಾಜ್ಯ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ ಅದು ಅಧಿವೇಶನದಲ್ಲಿರುವಾಗ ಒಂದು ಅಧಿವೇಶನದಲ್ಲಿ ಅಥವಾ ಒಂದಾದಮೇಲೊಂದರಂತೆ ಅನುಕ್ರಮವಾಗಿ ಬರುವ ಎರಡು ಅಧಿವೇಶನಗಳಲ್ಲಿ ಅಡಕವಾಗಬಹುದಾದಂಥ ಒಟ್ಟು ಮೂವತ್ತು ದಿವಸಗಳ ಅವಧಿಗಾಗಿ ಇಡತಕ್ಕದ್ದು ಮತ್ತು ಹಾಗೆ ಇಡಲಾದಂಥ ಅಧಿವೇಶನವು ಅಥವಾ ಅದರ ನಿಕಟೋತ್ತರದ ಅಧಿವೇಶನವು ಮುಕ್ತಾಯವಾಗುವುದಕ್ಕೆ ಮುಂಚೆ ಆ ನಿಯಮದಲ್ಲಿ ಯಾವುದೇ ಮಾರ್ಪಾಟನ್ನು ಮಾಡಬೇಕೆಂದು ಎರಡೂ ಸದನಗಳು ಒಪ್ಪಿದರೆ ಅಥವಾ ಆ ನಿಯಮವನ್ನು ರಚಿಸಕೂಡದೆಂದು ಎರಡೂ ಸದನಗಳು ಒಪ್ಪಿದರೆ, ಆ ತರುವಾಯ ಆ ನಿಯಮವು ಸಂದರ್ಭಾನುಸಾರ ಅಂಥ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗಿರತಕ್ಕದ್ದು ಅಥವಾ ಪರಿಣಾಮಕಾರಿಯಾಗಿರತಕ್ಕದ್ದಲ್ಲ; ಆದಾಗ್ಯೂ, ಅಂಥ ಯಾವುದೇ ಮಾರ್ಪಾಟು ಅಥವಾ ರದ್ದಿಯಾತಿಯು ಆ ನಿಯಮದ ಮೇರೆಗೆ ಹಿಂದೆ ಮಾಡಿದ ಯಾವುದೇ ಕಾರ್ಯದ ಸಿಂಧುತ್ವಕ್ಕೆ ಬಾಧಕವನ್ನುಂಟು ಮಾಡತಕ್ಕದ್ದಲ್ಲ.

**75. ಉಪವಿಧಿಗಳು:–** (1) ಯೋಜನಾ ಪ್ರಾಧಿಕಾರವು ರಾಜ್ಯ ಸರ್ಕಾರದ ಪೂರ್ವ ಮಂಜೂರಾತಿಯೊಂದಿಗೆ [1][ಬೃಹತ್ ಯೋಜನೆ][1] ಯಲ್ಲಿ ಸೇರಿಸಲಾದ ಉದ್ದೇಶಗಳನ್ನು ಈಡೇರಿಸಲು ಈ ಅಧಿನಿಯಮದ ಉಪಬಂಧಗಳಿಗೆ ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳಿಗೆ ಸುಸಂಗತವಾಗಿರುವ ಉಪವಿಧಿಗಳನ್ನು ರಚಿಸಬಹುದು.

1. 2005ರ ಅಧಿನಿಯಮ ಸಂ. 1ರ ಮೂಲಕ 14–2–2005ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) ಈ ಪ್ರಕರಣದ ಮೇರೆಗೆ ರಚಿಸಿದ ಉಪವಿಧಿಯು, ಅಂಥ ಉಪವಿಧಿಯಲ್ಲಿ ನಿರ್ದಿಷ್ಟಪಡಿಸಿರುವಂಥ ಉಪವಿಧಿಗಳ ಯಾವುದೇ ಉಪಬಂಧವನ್ನು ಉಲ್ಲಂಘಿಸುವ ವ್ಯಕ್ತಿಯು ಅಪರಾಧವು ನಿರ್ಣಯವಾದ ಮೇಲೆ ಒಂದು ನೂರು ರೂಪಾಯಿಗಳಿಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ಮತ್ತು ಮುಂದುವರೆಯುತ್ತಿರುವ ಉಲ್ಲಂಘನೆಯ ಸಂದರ್ಭದಲ್ಲಿ, ಅಂಥ ಮೊದಲ ಉಲ್ಲಂಘನೆಗಾಗಿ ಅಪರಾಧವು ನಿರ್ಣಯವಾದ ತರುವಾಯ ಅಂಥ ಉಲ್ಲಂಘನೆಯು ಮುಂದುವರೆಯುತ್ತಿರುವಂಥ ಅವಧಿಯಲ್ಲಿ ಪ್ರತಿಯೊಂದು ದಿವಸಕ್ಕಾಗಿ ಐದು ರೂಪಾಯಿಗಳಿಗೆ ವಿಸ್ತರಿಬಹುದಾದಂಥ ಹೆಚ್ಚಿನ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದೆಂದು ಉಪಬಂಧಿಸಬಹುದು.

(3) ಈ ಪ್ರಕರಣದ ಮೇರೆಗೆ ಉಪವಿಧಿಗಳನ್ನು ರಚಿಸುವ ಅಧಿಕಾರವು ಪೂರ್ವ ಪ್ರಕಟಣೆಯ ಷರತ್ತಿಗೊಳಪಟ್ಟಿರತಕ್ಕದ್ದು ಮತ್ತು ಅಂಥ ಪ್ರಕಟಣೆಯನ್ನು ರಾಜ್ಯಪತ್ರದಲ್ಲಿ ಮಾಡತಕ್ಕದ್ದು ಮತ್ತು ಅದು ರಾಜ್ಯ ಸರ್ಕಾರವು ನಿರ್ದೇಶಿಸಬಹುದಾದಂಥ ಇತರ ರೀತಿಯಲ್ಲಿರತಕ್ಕದ್ದು.

## ಅಧ್ಯಾಯ - XI

### ಸಂಕೀರ್ಣ

**76. ಕಾನೂನು ವ್ಯವಹರಣೆಗಳ ಪ್ರತಿಷೇಧ:–** ಈ ಅಧಿನಿಯಮದ ಉಪಬಂಧಗಳು ಅಥವಾ ಅದರ ಮೇರೆಗೆ ರಚಿಸಿದ ನಿಯಮಗಳ ಮೇರೆಗೆ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲಾಗಿದೆ ಎಂದು ತಾತ್ಪರ್ಯವಾಗುವ ಯಾವುದೇ ಕಾರ್ಯಕ್ಕೆ ಸಂಬಂಧಿಸಿದಂತೆ ಯೋಜನಾ ಪ್ರಾಧಿಕಾರದ ಅಥವಾ ಯಾರೇ ಲೋಕನೌಕರನ ಅಥವಾ ಈ ಅಧಿನಿಯಮದ ಮೇರೆಗೆ ಕ್ರಮಬದ್ಧವಾಗಿ ನೇಮಕಗೊಂಡ ಅಥವಾ ಅಧಿಕೃತಗೊಳಿಸಿದ ವ್ಯಕ್ತಿಗಳ ವಿರುದ್ಧ ಯಾವುದೇ ದಾವೆಯನ್ನು ಅಥವಾ ಇತರ ಕಾನೂನು ವ್ಯವಹರಣೆಗಳನ್ನು ನಡೆಸತಕ್ಕದ್ದಲ್ಲ.

[1][**76ಎ. ಮಂಡಲಿಯ ಮತ್ತು ಯೋಜನಾ ಪ್ರಾಧಿಕಾರದ ದಾಖಲೆಗಳ ರುಜುವಾತಿನ ವಿಧಾನ:–** ಮಂಡಲಿಯ ಅಥವಾ ಯಾವುದೇ ಯೋಜನಾ ಪ್ರಾಧಿಕಾರದ ಸ್ವಾಧೀನದಲ್ಲಿರುವ ಯಾವುದೇ ರಸೀದಿಯ, ಅರ್ಜಿಯ, ನಕ್ಷೆಯ, ನೋಟೀಸಿನ, ಆದೇಶದ, ರಿಜಿಸ್ಟರಿನಲ್ಲಿನ ನಮೂದಿನ ಅಥವಾ ಇತರ ದಸ್ತಾವೇಜಿನ

ಪ್ರತಿಯನ್ನು, ಅದರ ಕಾನೂನು ಸಮ್ಮತ ರಕ್ಷಕನು ಅಥವಾ ಈ ಬಗ್ಗೆ ಮಂಡಲಿಯು ಅಥವಾ ಯೋಜನಾ ಪ್ರಾಧಿಕಾರವು ಅಧಿಕೃತಗೊಳಿಸಿದ ಇತರ ವ್ಯಕ್ತಿಯು ಅದನ್ನು ಕ್ರಮಬದ್ಧವಾಗಿ ಪ್ರಮಾಣೀಕರಿಸಿದರೆ, ಅದನ್ನು ಆ ನಮೂದಿನ ಅಥವಾ ದಸ್ತಾವೇಜಿನ ಅಸ್ತಿತ್ವದ ಬಗ್ಗೆ ಮೇಲ್ನೋಟ ಸಾಕ್ಷ್ಯವಾಗಿ ಸ್ವೀಕರಿಸತಕ್ಕದ್ದು ಮತ್ತು ಅದನ್ನು ಪ್ರತಿಯೊಂದು ಪ್ರಕರಣದಲ್ಲಿ ಅದರಲ್ಲಿ ದಾಖಲು ಮಾಡಿದ ವಿಷಯ ಮತ್ತು ವ್ಯವಹಾರದ ಬಗ್ಗೆ ಮೂಲ ನಮೂದನ್ನು ಅಥವಾ ದಸ್ತಾವೇಜನ್ನು ಹಾಜರುಪಡಿಸಿದರೆ, ಅಂಥ ವಿಷಯಗಳನ್ನು ರುಜುವಾತುಪಡಿಸಲು ಅಂಗೀಕಾರಾರ್ಹವಾಗಬಹುದಾದಷ್ಟರ ಮಟ್ಟಿಗೆ ಅದನ್ನು ಸಾಕ್ಷ್ಯವೆಂದು ಅಂಗೀಕರಿಸತಕ್ಕದ್ದು.

1. 1964ರ ಅಧಿನಿಯಮ ಸಂ. 14ರ ಮೂಲಕ 76ಎ ಯಿಂದ 76ಎಂ ವರೆಗಿನ ಪ್ರಕರಣಗಳನ್ನು ಸೇರಿಸಲಾಗಿದೆ.

**76ಬಿ. ಮಂಡಲಿಯ ಅಥವಾ ಯೋಜನಾ ಪ್ರಾಧಿಕಾರದ ಅಧಿಕಾರಿಗಳನ್ನು ಮತ್ತು ನೌಕರರನ್ನು ಸಮನು ಮಾಡುವುದರ ಬಗ್ಗೆ ನಿರ್ಬಂಧ:–** ಮಂಡಲಿಯ ಅಥವಾ ಯಾವುದೇ ಯೋಜನಾ ಪ್ರಾಧಿಕಾರದ ಯಾರೇ ಅಧ್ಯಕ್ಷನನ್ನು, ಸದಸ್ಯನನ್ನು ಅಥವಾ ಅಧಿಕಾರಿಯನ್ನು ಅಥವಾ ನೌಕರನನ್ನು ಯಾವ ಕಾನೂನು ವ್ಯವಹರಣೆಯಲ್ಲಿ ಮಂಡಲಿಯು ಅಥವಾ ಯೋಜನಾ ಪ್ರಾಧಿಕಾರವು ಪಕ್ಷಕಾರನಾಗಿಲ್ಲವೋ ಆ ಯಾವುದೇ ಕಾನೂನು ವ್ಯವಹರಣೆಯಲ್ಲಿ, ವಿಶೇಷ ಕಾರಣಕ್ಕಾಗಿ ನ್ಯಾಯಾಲಯವು ಆದೇಶ ಮಾಡಿದ್ದ ಹೊರತು ಯಾವ ರಿಜಿಸ್ಟರಿನ ಅಥವಾ ದಸ್ತಾವೇಜಿನ ಒಳಾಂಶಗಳನ್ನು ಪ್ರಮಾಣಿತ ಪ್ರತಿಯ ಮೂಲಕ 76ಎ ಪ್ರಕರಣದ ಮೇರೆಗೆ ರುಜುವಾತುಮಾಡಬಹುದೋ ಆ ಯಾವುದೇ ರಿಜಿಸ್ಟರನ್ನು ಅಥವಾ ದಸ್ತಾವೇಜನ್ನು ಹಾಜರುಪಡಿಸಲು, ಅದರಲ್ಲಿ ದಾಖಲಿಸಿದ ವಿಷಯಗಳನ್ನು ಮತ್ತು ವ್ಯವಹಾರಗಳನ್ನು ರುಜುವಾತುಪಡಿಸಲು ಸಾಕ್ಷಿದಾರನಾಗಿ ಹಾಜರಾಗಲು ಅಗತ್ಯಪಡಿಸತಕ್ಕದ್ದಲ್ಲ.

**76ಸಿ. ಕಂಪನಿಗಳಿಂದ ಅಪರಾಧಗಳು:–** (1) ಈ ಅಧಿನಿಯಮದ ಮೇರೆಗಿನ ಅಪರಾಧವನ್ನು ಮಾಡಿದ ವ್ಯಕ್ತಿಯು ಕಂಪನಿಯಾಗಿದ್ದರೆ ಆ ಅಪರಾಧವನ್ನು ಮಾಡಿದ ಕಾಲದಲ್ಲಿ ಆ ಕಂಪನಿಯ ಪ್ರಭಾರದಲ್ಲಿದ್ದ ಮತ್ತು ಆ ಕಂಪನಿಯ ವ್ಯವಹಾರವನ್ನು ನಡೆಸುವುದಕ್ಕಾಗಿ ಅದಕ್ಕೆ ಜವಾಬ್ದಾರನಾಗಿದ್ದ ಪ್ರತಿಯೊಬ್ಬ ವ್ಯಕ್ತಿಯು ಮತ್ತು ಕಂಪನಿಯೂ ಸಹ ಆ ಅಪರಾಧದ ಬಗ್ಗೆ ತಪ್ಪಿತಸ್ಥರಾಗಿರುವುದಾಗಿ ಭಾವಿಸತಕ್ಕದ್ದು ಮತ್ತು ತದನುಸಾರವಾಗಿ ವ್ಯವಹರಣೆಗೆ ಗುರಿಯಾಗತಕ್ಕದ್ದು ಮತ್ತು ದಂಡಿತರಾಗತಕ್ಕದ್ದು:

ಪರಂತು, ಈ ಉಪಪ್ರಕರಣದಲ್ಲಿ ಒಳಗೊಂಡಿರುವುದು ಯಾವುದೂ, ಈ ಅಧಿನಿಯಮದಲ್ಲಿ ಉಪಬಂಧಿಸಿರುವ ಯಾವುದೇ ದಂಡನೆಗೆ ಅಂಥ ವ್ಯಕ್ತಿಯನ್ನು ಅವನು ಆ ಅಪರಾಧವು ತಿಳಿಯದೆಯೇ ಮಾಡಲಾಯಿತೆಂದು ಅಥವಾ ಅಂಥ ಅಪರಾಧವನ್ನು ಮಾಡುವುದನ್ನು ತಡೆಗಟ್ಟಲು ಎಲ್ಲಾ ಯುಕ್ತ ಶ್ರದ್ಧೆಯನ್ನು ಅವನು ವಹಿಸಿದ್ದನೆಂದು ರುಜುವಾತುಪಡಿಸಿದರೆ ಗುರಿಪಡಿಸತಕ್ಕದ್ದಲ್ಲ.

(2) ಉಪಪ್ರಕರಣ (1)ರಲ್ಲಿ ಏನೇ ಅಡಕವಾಗಿದ್ದಾಗ್ಯೂ, ಈ ಅಧಿನಿಯಮದ ಮೇರೆಗಿನ ಅಪರಾಧವನ್ನು ಕಂಪನಿಯು ಮಾಡಿರುವಲ್ಲಿ, ಮತ್ತು ಆ ಅಪರಾಧವನ್ನು ಆ ಕಂಪನಿಯ ಯಾವನೇ ನಿರ್ದೇಶಕನ, ವ್ಯವಸ್ಥಾಪಕನ, ಕಾರ್ಯದರ್ಶಿಯ ಅಥವಾ ಇತರ ಅಧಿಕಾರಿಯ ಸಮ್ಮತಿ ಅಥವಾ ಪರೋಕ್ಷ ಸಮ್ಮತಿಯಿಂದ ಮಾಡಲಾಗಿದೆ ಎಂದು ಅಥವಾ ಅವನ ಯಾವುದೇ ನಿರ್ಲಕ್ಷತೆಗೆ ಆರೋಪಿಸಬಹುದೆಂದು ರುಜುವಾತುಪಡಿಸಿರುವಲ್ಲಿ ಅಂಥ ನಿರ್ದೇಶಕನು, ವ್ಯವಸ್ಥಾಪಕನು, ಕಾರ್ಯದರ್ಶಿಯು ಅಥವಾ ಇತರ ಅಧಿಕಾರಿಯು ತದನುಸಾರವಾಗಿ ವ್ಯವಹರಣೆಗೆ ಗುರಿಯಾಗತಕ್ಕದ್ದು ಮತ್ತು ದಂಡಿತನಾಗತಕ್ಕದ್ದು.

**ವಿವರಣೆ:–** ಈ ಪ್ರಕರಣದ ಉದ್ದೇಶಕ್ಕಾಗಿ,–

(ಎ) "ಕಂಪನಿ" ಎಂದರೆ ನಿಗಮಿತ ನಿಕಾಯ ಮತ್ತು ಅದು ಒಂದು ಫರ್ಮು ಅಥವಾ ವ್ಯಕ್ತಿಗಳ ಇತರ ಸಂಘವನ್ನು ಒಳಗೊಳ್ಳುತ್ತದೆ; ಮತ್ತು

(ಬಿ) ಒಂದು ಫರ್ಮಿಗೆ ಸಂಬಂಧಪಟ್ಟಂತೆ "ನಿರ್ದೇಶಕ" ಎಂದರೆ ಫರ್ಮಿನ ಪಾಲುದಾರ.

**76ಡಿ. ಕಂಟ್ರಾಕ್ಟರನಿಗೆ ಅಡ್ಡಿಪಡಿಸುವುದಕ್ಕಾಗಿ ಅಥವಾ ಗುರುತನ್ನು ತೆಗೆದುಹಾಕುವುದಕ್ಕಾಗಿ ದಂಡನೆ:–** ಯಾರೇ ವ್ಯಕ್ತಿಯು,–

(ಎ) ಮಂಡಲಿಯು ಅಥವಾ ಯಾವುದೇ ಯೋಜನಾ ಪ್ರಾಧಿಕಾರಿಯು ತೊಡಗಿಸಿದ ಅಥವಾ ನಿಯೋಜಿಸಿದ ಯಾರೇ ವ್ಯಕ್ತಿಯನ್ನು ಅಥವಾ ಯಾವ ವ್ಯಕ್ತಿಯೊಂದಿಗೆ ಮಂಡಲಿಯು ಅಥವಾ ಯೋಜನಾ ಪ್ರಾಧಿಕಾರವು ಕರಾರನ್ನು ಮಾಡಿಕೊಂಡಿರುವುದೋ ಆ ಯಾರೇ ವ್ಯಕ್ತಿಯನ್ನು ಅಂಥ ವ್ಯಕ್ತಿಯು ತನ್ನ ಕರ್ತವ್ಯವನ್ನು ನೆರವೇರಿಸುವಲ್ಲಿ ಅಥವಾ ನಿರ್ವಹಿಸುವಲ್ಲಿ, ಅಥವಾ ಈ ಅಧಿನಿಯಮದ ಮೇರೆಗೆ ಯಾವ ಕಾರ್ಯವನ್ನು ಮಾಡಲು ಅವನಿಗೆ ಅಧಿಕಾರ ನೀಡಲಾಗಿದೆಯೋ ಅಥವಾ ಅಗತ್ಯಪಡಿಸಲಾಗಿದೆಯೋ ಆ ಯಾವುದೇ ಕಾರ್ಯಕ್ಕೆ ಅಡ್ಡಿಯುಂಟು ಮಾಡಿದರೆ ಅಥವಾ ಅವನಿಗೆ ಉಪದ್ರವಕೊಟ್ಟರೆ; ಅಥವಾ

(ಬಿ) ಈ ಅಧಿನಿಯಮದ ಮೇರೆಗೆ ಅಧಿಕೃತಗೊಳಿಸಿದ ಕಾಮಗಾರಿಗಳ ನಿರ್ವಹಣೆಗೆ ಅವಶ್ಯವಾದ ಯಾವುದೇ ಮಟ್ಟವನ್ನು ಅಥವಾ ದಿಕ್ಕನ್ನು ಸೂಚಿಸುವ ಉದ್ದೇಶಕ್ಕಾಗಿ ನಿಲ್ಲಿಸಿರುವ ಯಾವುದೇ ಗುರುತನ್ನು ತೆಗೆದುಹಾಕಿದರೆ

– ಅವನು ಎರಡು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ಅಥವಾ ಎರಡು ತಿಂಗಳುಗಳಿಗೆ ವಿಸ್ತರಿಸಬಹುದಾದಂಥ ಅವಧಿಯ ಕಾರಾವಾಸದಿಂದ ದಂಡಿತನಾಗತಕ್ಕದ್ದು.

**76ಇ. ಪ್ರಾಸಿಕ್ಯೂಷನ್‌ಗೆ ಮಂಜೂರಾತಿ:–** ಈ ಅಧಿನಿಯಮದ ಮೇರೆಗೆ ದಂಡನೀಯವಾದ ಯಾವುದೇ ಅಪರಾಧಕ್ಕಾಗಿ ಯಾವುದೇ ಪ್ರಾಸಿಕ್ಯೂಷನನ್ನು, ರಾಜ್ಯ ಸರ್ಕಾರದ ಅಥವಾ ಯೋಜನಾ ಪ್ರಾಧಿಕಾರದ ಅಥವಾ ಈ ಬಗ್ಗೆ ರಾಜ್ಯ ಸರ್ಕಾರವು ಅಥವಾ ಯೋಜನಾ ಪ್ರಾಧಿಕಾರವು ಅಧಿಕೃತಗೊಳಿಸಿದ ಯಾರೇ ಅಧಿಕಾರಿಯ ಪೂರ್ವ ಮಂಜೂರಾತಿ ಪಡೆದ ಹೊರತು ಹೂಡತಕ್ಕದ್ದಲ್ಲ.

**76ಎಫ್. ಅಪರಾಧಗಳ ರಾಜಿ:–** (1) ರಾಜ್ಯ ಸರ್ಕಾರವು ಅಥವಾ ಸಂಬಂಧಪಟ್ಟ ಯೋಜನಾ ಪ್ರಾಧಿಕಾರವು ಅಥವಾ ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ಈ ಬಗ್ಗೆ ರಾಜ್ಯ ಸರ್ಕಾರವು ಅಥವಾ ಯೋಜನಾ ಪ್ರಾಧಿಕಾರವು ಅಧಿಕೃತಗೊಳಿಸಿದ ಯಾರೇ ವ್ಯಕ್ತಿಯು, ವ್ಯವಹರಣೆಗಳನ್ನು ಹೂಡುವುದಕ್ಕೆ ಮುಂಚೆಯೇ ಆಗಲಿ ಅಥವಾ ತರುವಾಯವೇ ಆಗಲಿ ಈ ಅಧಿನಿಯಮದ ಮೂಲಕ ಅಥವಾ ಅದರ ಮೇರೆಗೆ ದಂಡನೀಯವಾದ ಯಾವುದೇ ಅಪರಾಧವನ್ನು ರಾಜಿ ಮಾಡಿಕೊಳ್ಳಬಹುದು.

(2) ಅಪರಾಧವನ್ನು ರಾಜಿ ಮಾಡಿಕೊಂಡಾಗ, ಅಪರಾಧಿಯು, ಅಭಿರಕ್ಷೆಯಲ್ಲಿದ್ದರೆ ಅವನನ್ನು ಬಿಡುಗಡೆ ಮಾಡತಕ್ಕದ್ದು ಮತ್ತು ರಾಜಿ ಮಾಡಿಕೊಂಡ ಅಪರಾಧಕ್ಕೆ ಸಂಬಂಧಿಸಿದಂತೆ ಅವನ ವಿರುದ್ಧ ಯಾವುದೇ ಹೆಚ್ಚಿನ ವ್ಯವಹರಣೆಯನ್ನು ಕೈಗೊಳ್ಳತಕ್ಕದ್ದಲ್ಲ.

[1][**76ಎಫ್ಎಫ್. ನಿರ್ದಿಷ್ಟ ಅಭಿವೃದ್ಧಿಯನ್ನು ಮತ್ತು ಭೂ ಬಳಕೆಯ ಬದಲಾವಣೆಗಳನ್ನು ಸಕ್ರಮಗೊಳಿಸುವುದು:–** (1) ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಯಾವುದೇ ಭೂಮಿಯನ್ನು 14, 14ಎ, 15ನೇ ಪ್ರಕರಣವನ್ನು, 17ನೇ ಪ್ರಕರಣವನ್ನು ಅಥವಾ ವಿನಿಯಮನಗಳನ್ನು ಉಲ್ಲಂಘಿಸಿ ಅಥವಾ 15ನೇ

ಪ್ರಕರಣದ ಮೇರೆಗೆ ನೀಡಿದ ಪ್ರಾರಂಭ ಪ್ರಮಾಣಪತ್ರವನ್ನು ಉಲ್ಲಂಘಿಸಿ ಅಭಿವೃದ್ಧಿ ಮಾಡಿರುವಲ್ಲಿ ಅಥವಾ ಭೂ ಬಳಕೆಯಲ್ಲಿ ಬದಲಾವಣೆ ಮಾಡಿರುವಲ್ಲಿ, ಯೋಜನಾ ಪ್ರಾಧಿಕಾರವು, ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧಿನಿಯಮ, 2004ರ ಪ್ರಾರಂಭದ ದಿನಾಂಕಕ್ಕೆ ಮುಂಚೆ ಮಾಡಿದ ಅಂಥ ಅಭಿವೃದ್ಧಿಯನ್ನು ಮತ್ತು ಭೂ ಬಳಕೆಯ ಬದಲಾವಣೆಯನ್ನು ನಿಯಮಿಸಬಹುದಾದಂಥ ನಿಯಮಗಳಿಗೊಳಪಟ್ಟು ಹಾಗೂ ಬೇರೆ ಬೇರೆ ಉದ್ದೇಶಗಳಿಗಾಗಿ ಬೇರೆ ಬೇರೆಯಾಗಿರಬಹುದಾದಂಥ, ಆದರೆ, ಅಭಿವೃದ್ಧಿಯ ಅಂದಾಜು ವೆಚ್ಚವನ್ನು ಮೀರದಂತೆ ನಿಯಮಿಸಿದ ಮೊಬಲಗನ್ನು ಸಂದಾಯ ಮಾಡಿದ ಮೇಲೆ ಸಕ್ರಮಗೊಳಿಸಬಹುದು.

1. 2007ರ ಅಧಿನಿಯಮ ಸಂಖ್ಯೆ 1ರ ಮೂಲಕ 76 ಎಫ್‌ಎಫ್ ಮತ್ತು 76 ಎಫ್‌ಎಫ್‌ಎಫ್ ಪ್ರಕರಣಗಳನ್ನು ದಿನಾಂಕ 15-9-2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ. ದಯವಿಟ್ಟು, ಅಧಿನಿಯಮದ ಕೊನೆಯಲ್ಲಿ ಅಧಿಸೂಚನೆಯ ಪಠ್ಯವನ್ನು ನೋಡಿ.

(2) ಉಪ-ಪ್ರಕರಣ(1)ರಲ್ಲಿ ಉಲ್ಲೇಖಿಸಿದ ಅಂಥ ಯಾವುದೇ ಭೂ ಅಭಿವೃದ್ಧಿಯನ್ನು ಅಥವಾ ಭೂ ಬಳಕೆಯಲ್ಲಿನ ಬದಲಾವಣೆಯನ್ನು,-

(i) ಯಾವುದೇ ರಸ್ತೆಯ ಅಥವಾ ಉದ್ದೇಶಿತ ಒಳ ವರ್ತುಲ ರಸ್ತೆಯ, ರಾಷ್ಟ್ರೀಯ ಹೆದ್ದಾರಿಗಳ, ಬೈಪಾಸ್ ರಸ್ತೆಯ ಹೊರ ವರ್ತುಲ ರಸ್ತೆಯ ಅಥವಾ ಸಮೂಹ ತ್ವರಿತ ಸಾರಿಗೆ ವ್ಯವಸ್ಥೆ (ರೈಲು) ಯೋಜನೆಗಳ ಪಂಕ್ತೀಕರಣದಿಂದ ಪರಿಣಾಮಕ್ಕೊಳಗಾದ ಭೂಮಿಯಲ್ಲಿ;

(ii) ರಾಜ್ಯ ಸರ್ಕಾರಕ್ಕೆ ಅಥವಾ ಕೇಂದ್ರ ಸರ್ಕಾರಕ್ಕೆ ಸೇರಿದ ಅಥವಾ ರಾಜ್ಯ ಸರ್ಕಾರಕ್ಕೆ ಅಥವಾ ಕೇಂದ್ರ ಸರ್ಕಾರಕ್ಕೆ ಸೇರಿದ ಯಾವುದೇ ಕಟ್ಟಡಕ್ಕೆ ಹೊಂದಿಕೊಂಡಿರುವ ಭೂಮಿಯ ಮೇಲೆ;

(iii) ಹಿಂದಿನವರು ಯಾವುದೇ ಸ್ವಾಮ್ಯ ಹೊಂದಿರದ ಬೇರೊಬ್ಬ ವ್ಯಕ್ತಿಗೆ ಸೇರಿದ ಭೂಮಿಯ ಮೇಲೆ;

(iv) ಕೇಂದ್ರ ಸರ್ಕಾರದ ಅಥವಾ ರಾಜ್ಯ ಸರ್ಕಾರದ ಒಡೆತನದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ಯಾವುದೇ ಮಂಡಳಿಗೆ ಅಥವಾ ನಿಗಮಕ್ಕೆ ಸೇರಿದ ಭೂಮಿಯ ಮೇಲೆ;

(v) ಯಾವುದೇ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಅಥವಾ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಸೇರಿದ ಅಥವಾ ಅವುಗಳಲ್ಲಿ ನಿಹಿತಗೊಂಡ ಭೂಮಿಯ ಮೇಲೆ;

(vi) ಸ್ಥಳೀಯ ಪ್ರಾಧಿಕಾರಕ್ಕೆ ಸೇರಿದ ಅಥವಾ ಅದರಲ್ಲಿ ನಿಹಿತಗೊಂಡ ಭೂಮಿಯ ಮೇಲೆ;

(vii) ಮಳೆ ನೀರಿನ ಮೋರಿಗಳಿಗೆ, ಕೆರೆಯ ಪಾತ್ರದ ಪ್ರದೇಶಗಳಿಗೆ, ನದಿ ಮಾರ್ಗಕ್ಕೆ ಅಥವಾ ನದಿ ಪಾತ್ರಗಳಿಗೆ ಮತ್ತು ಕಾಲುವೆಗಳಿಗೆ ಅಥವಾ ಹೈಟೆನ್ಷನ್ ವಿದ್ಯುತ್ ತಂತಿ ಕೆಳಗೆ ಹೊಂದಿಕೊಂಡಂತಿರುವ ಭೂಮಿಯ ಮೇಲೆ;

(viii) ಉದ್ಯಾನವನಗಳಿಗೆ, ಆಟದ ಮೈದಾನಗಳಿಗೆ, ಬಯಲು ಸ್ಥಳಗಳಿಗೆ ಅಥವಾ ನಾಗರಿಕ ಸೌಕರ್ಯಗಳಿಗೆ ಮೀಸಲಿಟ್ಟ ಭೂಮಿಯಲ್ಲಿ

- ಮಾಡಿದ್ದರೆ ಅದನ್ನು ಸಕ್ರಮಗೊಳಿಸತಕ್ಕದ್ದಲ್ಲ.

(3) ವಿಶೇಷವೆನಿಸಿದ ಅಭಿವೃದ್ಧಿಯನ್ನು ಮತ್ತು ಅಪಾಯಕಾರಿ ಕೈಗಾರಿಕೆಯನ್ನು ಅಥವಾ ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ 'ರೆಡ್' (RED) ಎಂದು ವರ್ಗೀಕರಿಸಲಾಗಿರುವ ಕೈಗಾರಿಕೆಯನ್ನು ಅನುಗುಣವಲ್ಲದ ವಲಯದಲ್ಲಿ ಸಕ್ರಮಗೊಳಿಸತಕ್ಕದ್ದಲ್ಲ. ಅನುಗುಣ ವಲಯದಲ್ಲಿಯೂ ಕೂಡ, ಅದನ್ನು ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿಯ ಒಪ್ಪಿಗೆ ಮೇಲೆ ಮಾತ್ರ ಸಕ್ರಮಗೊಳಿಸತಕ್ಕದ್ದು.

(4) ಯಾವುದೇ ಅಭಿವೃದ್ಧಿಯನ್ನು, ಹೈಟೆನ್ಷನ್ ಮಾರ್ಗಗಳಿಂದ ಅದು ಮುಕ್ತವಾಗಿದೆ ಎಂದು ಮತ್ತು ಅಗ್ನಿ ಸುರಕ್ಷಾ ಕ್ರಮಗಳನ್ನು ಕೈಗೊಳ್ಳಲಾಗಿದೆ ಎಂದು ಸ್ಥಿರೀಕರಿಸಿದ ಹೊರತು ಸಕ್ರಮಗೊಳಿಸತಕ್ಕದ್ದಲ್ಲ.

(5) ಯಾವುದೇ ಅಭಿವೃದ್ಧಿಯನ್ನು, ಭಾರತ ಸರ್ಕಾರದ ಪರಿಸರ ಮತ್ತು ಅರಣ್ಯ ಮಂತ್ರಾಲಯ, ಕರಾವಳಿ ವಲಯ ವಿನಿಯಮನಗಳಲ್ಲಿ ಬರುವ ಪ್ರದೇಶದಲ್ಲಿ ಸಕ್ರಮಗೊಳಿಸತಕ್ಕದ್ದಲ್ಲ.

(6) ಉಪವಿಧಿಯನ್ನು ಉಲ್ಲಂಘಿಸಿ ನೆಲಮಹಡಿಯಲ್ಲಿ ಅಥವಾ ಬಳಕೆ ಸ್ಥಳದಲ್ಲಿ ಮಾಡಿದ ಯಾವುದೇ ಅಭಿವೃದ್ಧಿಯನ್ನು ಸಕ್ರಮಗೊಳಿಸತಕ್ಕದ್ದಲ್ಲ.

(7) ನಿವಾಸೇತರ ಕಟ್ಟಡಗಳ ಸಂದರ್ಭದಲ್ಲಿ ಶೇಕಡಾ ಇಪ್ಪತ್ತೈದು ಮತ್ತು ವಾಸದ ಸ್ಥಳಗಳ ಸಂದರ್ಭದಲ್ಲಿ ಶೇಕಡಾ ಐವತ್ತನ್ನು ಮೀರಿ ಕಟ್ಟಡದ ಸುತ್ತಲೂ ಬಿಡುವ ಜಾಗದ ಪ್ರಮಾಣವನ್ನು ಉಲ್ಲಂಘಿಸಿ ಮಾಡಿದ ಯಾವುದೇ ಅಭಿವೃದ್ಧಿಯನ್ನು ಸಕ್ರಮಗೊಳಿಸತಕ್ಕದಲ್ಲ.

(8) ಭೂ ಬಳಕೆಯಲ್ಲಿ ಬದಲಾವಣೆಯ ಸಂಬಂಧದಲ್ಲಿನ ಉಲ್ಲಂಘನೆಯನ್ನು ಮೊದಲು ಸಕ್ರಮಗೊಳಿಸಿದ ಹೊರತು ಯಾವುದೇ ಅಭಿವೃದ್ಧಿಯನ್ನು ಸಕ್ರಮಗೊಳಿಸತಕ್ಕದ್ದಲ್ಲ.

(9) ಉಲ್ಲಂಘನೆಯು ಅಂಥ ಗೊತ್ತುಪಡಿಸಿದ ಮಿತಿಯನ್ನು ಮೀರಿದ್ದು ಆದರೆ ವಾಸದ ಕಟ್ಟಡಗಳ ಸಂಬಂಧದಲ್ಲಿ ಅನುಮತಿಸಿದ ನೆಲ ಪ್ರದೇಶದ ಅನುಪಾತವು ಶೇಕಡಾ ಐವತ್ತನ್ನು ಮೀರದ ಮತ್ತು ನಿವಾಸೇತರ ಕಟ್ಟಡಗಳ ಸಂಬಂಧದಲ್ಲಿ ಅನುಮತಿಸಿದ ನೆಲ ಪ್ರದೇಶದ ಅನುಪಾತವು ಶೇಕಡಾ ಇಪ್ಪತ್ತೈದರಷ್ಟನ್ನು ಮೀರದ ಯಾವುದೇ ಅಭಿವೃದ್ಧಿಯನ್ನು ಸಕ್ರಮಗೊಳಿಸತಕ್ಕದ್ದಲ್ಲ ಹಾಗೂ ಬೇರೆ ಬೇರೆ ಗರಿಷ್ಠ ಮಿತಿಯನ್ನು ಅಭಿವೃದ್ಧಿಯ ಬೇರೆ ಬೇರೆ ವರ್ಗದ ಸಂಬಂಧದಲ್ಲಿ ಗೊತ್ತುಪಡಿಸಬಹುದು:

ಪರಂತು, ಉಲ್ಲಂಘನೆಯ ಪರಿಣಾಮವಾಗಿ ಅಂಥ ಅಭಿವೃದ್ಧಿಯು ಗೊತ್ತುಪಡಿಸಿದ ಮಿತಿಯನ್ನು ಮೀರಿರುವಾಗ, ಅಂಥ ಅಭಿವೃದ್ಧಿಯನ್ನು, ಉಲ್ಲಂಘನೆಯ ಪರಿಣಾಮವಾಗಿ ಅಭಿವೃದ್ಧಿಯನ್ನು ಈ ಅಧಿನಿಯಮದ ಮೇರೆಗೆ ಸಕ್ರಮಗೊಳಿಸಬಹುದಾದ ಮಿತಿಯಲ್ಲಿ ತಂದ ಹೊರತು ಸಕ್ರಮಗೊಳಿಸತಕ್ಕದ್ದಲ್ಲ.

(10) ಭೂ ಬಳಕೆಯ ಬದಲಾವಣೆಯ ಸಂಬಂಧದಲ್ಲಿ ಉಲ್ಲಂಘನೆಯ ಸಕ್ರಮಗೊಳಿಸುವಿಕೆಯನ್ನು ಸಾಧ್ಯವಾದಷ್ಟು ಮಟ್ಟಿಗೆ 14ಎ ಪ್ರಕರಣದ ಅನುಸಾರವಾಗಿ ಮಾಡತಕ್ಕದ್ದು.

(11) ಎರಡು ಮಹಡಿಗಳಿಗಿಂತ ಹೆಚ್ಚು ಇರುವ ಯಾವುದೇ ಕಟ್ಟಡದ ಸಂಬಂಧದಲ್ಲಿನ ಯಾವುದೇ ಅಭಿವೃದ್ಧಿಯನ್ನು, ಆ ಕಟ್ಟಡದ ಮೋಜಣಿ ಸ್ಥಿರತೆಗೆ ಸಂಬಂಧಿಸಿದಂತೆ ಮೋಜಣಿ ಇಂಜಿನಿಯರ್‌ನಿಂದ ಪ್ರಮಾಣ ಪತ್ರವನ್ನು ಸಲ್ಲಿಸಿದ ಹೊರತು ಸಕ್ರಮಗೊಳಿಸತಕ್ಕದ್ದಲ್ಲ.

(12) ಪ್ರಮಾಣವನ್ನು ಅಥವಾ ವಲಯ ವಿನಿಯಮನವನ್ನು ಉಲ್ಲಂಘಿಸಿ, ಅನಧಿಕೃತ ನಿರ್ಮಾಣವನ್ನು ಮಾಡಿರುವ ಮತ್ತು ನಿಯಮಿತ ಅವಧಿಯ ಒಳಗೆ ಸಕ್ರಮಗೊಳಿಸಲು ಅರ್ಜಿ ಸಲ್ಲಿಸದ ಕಟ್ಟಡದ ಮಾಲೀಕನ ಸಂದರ್ಭದಲ್ಲಿ ಕಟ್ಟಡಕ್ಕೆ ನೀರು ಮತ್ತು ವಿದ್ಯುತ್ ಸರಬರಾಜು ಪೂರ್ವ ಸೂಚನೆಯೊಂದಿಗೆ ಸಂಪರ್ಕ ಕಡಿತಕ್ಕೆ ಗುರಿಯಾಗತಕ್ಕದ್ದು.

(13) ಈ ಪ್ರಕರಣದ ಮೇರೆಗೆ ಸಕ್ರಮ ಕೋರುವ ಯಾರೇ ವ್ಯಕ್ತಿಯು, ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧಿನಿಯಮ, 2004 ಪ್ರಾರಂಭವಾದ ದಿನಾಂಕದಿಂದ ಮೂರು ತಿಂಗಳೊಳಗೆ ಯೋಜನಾ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸತಕ್ಕದ್ದು.

(14) ಅನುಮೋದಿತ ಬೃಹತ್ ಯೋಜನೆಯ ಕೃಷಿ ವಲಯದಲ್ಲಿ ಅಥವಾ ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಮೇರೆಗೆ ಘೋಷಿತ ಹಸಿರು ಪಟ್ಟಿ ಪ್ರದೇಶದಲ್ಲಿನ ಯಾವುದೇ ಅನಧಿಕೃತ ನಿರ್ಮಾಣ ಅಥವಾ ಮಾಡಲಾದ ಅಭಿವೃದ್ಧಿಯನ್ನು ಸಕ್ರಮಗೊಳಿಸತಕ್ಕದ್ದಲ್ಲ.

(15) ಯಾರೇ ವ್ಯಕ್ತಿಯು ಈ ಅಧಿನಿಯಮದ ಮೇರೆಗೆ ಒಂದೇ ಬಗೆಯ ಉಲ್ಲಂಘನೆಗಳಿಗಾಗಿ ಸಕ್ರಮ ಶುಲ್ಕವನ್ನು ಸಂದಾಯ ಮಾಡಿದ್ದರೆ, ಯಾವುದೇ ಇತರ ಕಾನೂನಿನ ಮೇರೆಗೆ ಸಕ್ರಮಗೊಳಿಸಲು ದಂಡವನ್ನು ಅಥವಾ ಶುಲ್ಕವನ್ನು ಸಂದಾಯ ಮಾಡಲು ಹೊಣೆಗಾರನಾಗಿರತಕ್ಕದ್ದಲ್ಲ.

(16) (1)ನೇ ಉಪ-ಪ್ರಕರಣದ ಮೇರೆಗೆ ಮಾಡಲಾದ ಎಲ್ಲ ಸಂದಾಯಗಳನ್ನು ನಗರ ಪ್ರದೇಶಗಳ ಮೂಲಸೌಕರ್ಯ ಅಭಿವೃದ್ಧಿ ನಿಧಿ ಎಂದು ಕರೆಯಲಾಗುವ ಸಂಬಂಧಪಟ್ಟ ಸ್ಥಳೀಯ/ಯೋಜನಾ ಪ್ರಾಧಿಕಾರಗಳಲ್ಲಿ ಇಡಲಾದ ಪ್ರತ್ಯೇಕ ನಿಧಿಗೆ ಜಮೆ ಮಾಡತಕ್ಕದ್ದು. ಇದನ್ನು ಮೂಲಸೌಕರ್ಯ, ನಾಗರಿಕ ಸೌಕರ್ಯಗಳು, ದೀಪ ವ್ಯವಸ್ಥೆ, ಉದ್ಯಾನಗಳು, ಕುಡಿಯುವ ನೀರು, ಚರಂಡಿ ವ್ಯವಸ್ಥೆಯ ಅಭಿವೃದ್ಧಿಗಾಗಿ ಮತ್ತು ಯಾವುದೇ ಇತರ ಮೂಲಸೌಕರ್ಯಕ್ಕಾಗಿ ನಿಯಮಿಸಬಹುದಾದಂತಹ ರೀತಿಯಲ್ಲಿ ಬಳಸತಕ್ಕದ್ದು.

**76ಎಫ್ಎಫ್ಎಫ್. ಅನಧಿಕೃತ ಉಲ್ಲಂಘನೆಗಳು ಅಥವಾ ನಿರ್ಮಾಣಗಳನ್ನು ತಡೆಯಲು ವಿಫಲಗೊಂಡ ಅಧಿಕಾರ ವ್ಯಾಪ್ತಿಯುಳ್ಳ ಅಧಿಕಾರಿಗೆ ದಂಡ:-** ತನ್ನ ಅಧಿಕಾರ ವ್ಯಾಪ್ತಿಯಲ್ಲಿ ಕೈಗೊಂಡಿರುವ ಅನಧಿಕೃತ ಉಲ್ಲಂಘನೆ ಅಥವಾ ನಿರ್ಮಾಣವನ್ನು ತಡೆಗಟ್ಟಲು ವಿಫಲಗೊಂಡಿರುವನೆಂದು ಸಾಬೀತಾದ ಅಧಿಕಾರ ವ್ಯಾಪ್ತಿ ಹೊಂದಿರುವ ಅಧಿಕಾರಿಯು ಗೊತ್ತುಪಡಿಸಬಹುದಾದಂತಹ ಶಿಕ್ಷೆಗೆ ಗುರಿಯಾಗತಕ್ಕದ್ದು.][1]

1. 2007ರ ಅಧಿನಿಯಮ ಸಂಖ್ಯೆ 1ರ ಮೂಲಕ 76 ಎಫ್ಎಫ್ ಮತ್ತು 76 ಎಫ್ಎಫ್ಎಫ್ ಪ್ರಕರಣಗಳನ್ನು ದಿನಾಂಕ 15-9-2007 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ. ದಯವಿಟ್ಟು, ಅಧಿನಿಯಮದ ಕೊನೆಯಲ್ಲಿ ಅಧಿಸೂಚನೆಯ ಪತ್ರವನ್ನು ನೋಡಿ.

**76ಜಿ. ದಂಡವನ್ನು ವಸೂಲು ಮಾಡಿದಾಗ ಅದನ್ನು ಯೋಜನಾ ಪ್ರಾಧಿಕಾರಕ್ಕೆ ಸಂದಾಯ ಮಾಡತಕ್ಕದ್ದು:-** ಈ ಅಧಿನಿಯಮದ ಮೇರೆಗೆ ಯಾವುದೇ ಪ್ರಾಸಿಕ್ಯೂಷನ್ನಿಗೆ ಸಂಬಂಧಿಸಿದಂತೆ ವಸೂಲು ಮಾಡಿದ ಎಲ್ಲಾ ದಂಡಗಳನ್ನು ಸಂಬಂಧಪಟ್ಟ ಯೋಜನಾ ಪ್ರಾಧಿಕಾರಕ್ಕೆ ಸಂದಾಯ ಮಾಡತಕ್ಕದ್ದು.

**76ಎಚ್. ಸದಸ್ಯ ಮತ್ತು ಅಧಿಕಾರಿಗಳು ಲೋಕನೌಕರರಾಗಿರತಕ್ಕದ್ದು:-** ಮಂಡಲಿಯ ಮತ್ತು ಪ್ರತಿಯೊಂದು ಯೋಜನಾ ಪ್ರಾಧಿಕಾರದ ಪ್ರತಿಯೊಬ್ಬ ಸದಸ್ಯನು ಮತ್ತು ಪ್ರತಿಯೊಬ್ಬ ಅಧಿಕಾರಿಯು ಮತ್ತು ಇತರ ಉದ್ಯೋಗಿಯು, ಭಾರತ ದಂಡ ಸಂಹಿತೆಯ 21ನೇ ಪ್ರಕರಣದ ಅರ್ಥವ್ಯಾಪ್ತಿಯೊಳಗೆ ಲೋಕನೌಕರನಾಗಿರುವುದಾಗಿ ಭಾವಿಸತಕ್ಕದ್ದು.

**76ಐ. ಆದೇಶಗಳ ಅಂತಿಮತೆ:-** ಈ ಅಧಿನಿಯಮದಲ್ಲಿ ಸ್ಪಷ್ಟವಾಗಿ ಅನ್ಯಥಾ ಉಪಬಂಧಿಸಲಾಗಿದ್ದ ಹೊರತು, ಈ ಅಧಿನಿಯಮದ ಮೇರೆಗೆ ರಾಜ್ಯ ಸರ್ಕಾರವು ಅಥವಾ ಆ ಮಂಡಲಿಯು ಮಾಡಿದ ಪ್ರತಿಯೊಂದು ಆದೇಶ ಅಥವಾ ಹೊರಡಿಸಿದ ನಿರ್ದೇಶನ ಅಥವಾ ಯಾವುದೇ ಯೋಜನಾ ಪ್ರಾಧಿಕಾರವು ಮಾಡಿದ ಆದೇಶ, ಹೊರಡಿಸಿದ ನೋಟೀಸು ಅಂತಿಮವಾಗಿರತಕ್ಕದ್ದು ಮತ್ತು ಅದನ್ನು ಯಾವುದೇ ದಾವೆ ಅಥವಾ ಇತರ ಕಾನೂನು ವ್ಯವಹರಣೆಯಲ್ಲಿ ಪ್ರಶ್ನಿಸತಕ್ಕದ್ದಲ್ಲ.

**76ಜೆ. ಕಾರ್ಯಗಳನ್ನು ಮತ್ತು ವ್ಯವಹರಣೆಗಳನ್ನು ಸಿಂಧುಗೊಳಿಸುವುದು:-** ಈ ಅಧಿನಿಯಮದ ಮೇರೆಗೆ ಮಾಡಿದ ಯಾವುದೇ ಕಾರ್ಯ ಅಥವಾ ಕೈಗೊಂಡ ವ್ಯವಹರಣೆಯನ್ನು,-

(ಎ) ಮಂಡಲಿಯ ಅಥವಾ ಯಾವುದೇ ಯೋಜನಾ ಪ್ರಾಧಿಕಾರದಲ್ಲಿನ ಯಾವುದೇ ಖಾಲಿ ಸ್ಥಾನ ಅಥವಾ ಅದರ ರಚನೆಯಲ್ಲಿ ಯಾವುದೇ ದೋಷವಿರುವ;

(ಬಿ) ಯಾರೇ ವ್ಯಕ್ತಿಯು ಸದಸ್ಯನಾಗಿರುವುದು ನಿಂತುಹೋಗಿರುವ;

(ಸಿ) 4ಎಫ್ ಪ್ರಕರಣದ ಮೇರೆಗೆ ಮಂಡಲಿ ಅಥವಾ ಯೋಜನಾ ಪ್ರಾಧಿಕಾರದೊಂದಿಗೆ ಸೇರಿಸಿಕೊಂಡ ಯಾರೇ ವ್ಯಕ್ತಿಯು ಸದರಿ ಪ್ರಕರಣವನ್ನು ಉಲ್ಲಂಘಿಸಿ ಮತದಾನ ಮಾಡಿರುವ; ಅಥವಾ

(ಡಿ) ಅಂಥ ವಿಫಲತೆಯಿಂದ ಯಾವುದೇ ಗಣನೀಯ ಅನ್ಯಾಯ ಉಂಟಾಗಿಲ್ಲದಿರುವಲ್ಲಿ, ಯಾರೇ ವ್ಯಕ್ತಿಗೆ ನೋಟೀಸನ್ನು ಜಾರಿ ಮಾಡಲು ತಪ್ಪಿರುವ; ಅಥವಾ

(ಇ) ಆ ಪ್ರಕರಣದ ಗುಣಾವಗುಣಗಳಿಗೆ ಬಾಧಕವಾಗದ ಯಾವುದೇ ಲೋಪ, ದೋಷ ಅಥವಾ ಅಕ್ರಮದ

- ಕಾರಣ ಮಾತ್ರದಿಂದಲೇ ಪ್ರಶ್ನಿಸತಕ್ಕದ್ದಲ್ಲ.

**76ಕೆ. ರಾಜ್ಯ ಸರ್ಕಾರದ ನಿಯಂತ್ರಣ:-** (1) ಪ್ರತಿಯೊಂದು ಯೋಜನಾ ಪ್ರಾಧಿಕಾರವು, ರಾಜ್ಯ ಸರ್ಕಾರವು ಈ ಅಧಿನಿಯಮದ ದಕ್ಷ ಆಡಳಿತಕ್ಕಾಗಿ ಕಾಲಕಾಲಕ್ಕೆ ಹೊರಡಿಸಬಹುದಾದಂಥ ನಿರ್ದೇಶನಗಳನ್ನು ಕಾರ್ಯಗತಗೊಳಿಸತಕ್ಕದ್ದು.

(2) ಯಾವುದೇ ಯೋಜನಾ ಪ್ರಾಧಿಕಾರವು ಈ ಅಧಿನಿಯಮದ ಮೇರೆಗೆ ಅದರ ಅಧಿಕಾರಗಳ ಚಲಾಯಿಸುವಿಕೆ ಮತ್ತು ಅದರ ಪ್ರಕಾರ್ಯಗಳ ನಿರ್ವಹಣೆಯಲ್ಲಿ ಅಥವಾ ಅದಕ್ಕೆ ಸಂಬಂಧಿಸಿದಂತೆ, ಆ ಯೋಜನಾ ಪ್ರಾಧಿಕಾರ ಮತ್ತು ಸ್ಥಳೀಯ ಪ್ರಾಧಿಕಾರದ ನಡುವೆ ಯಾವುದೇ ವಿವಾದವು ಉದ್ಭವಿಸಿದರೆ, ಅಂಥ ವಿವಾದದ ಬಗ್ಗೆ ರಾಜ್ಯ ಸರ್ಕಾರದ ತೀರ್ಮಾನವು ಅಂತಿಮವಾಗಿರತಕ್ಕದ್ದು.

**76ಎಲ್. ವಿವರಪಟ್ಟಿಕೆಗಳು ಮತ್ತು ಮಾಹಿತಿ:-** ಪ್ರತಿಯೊಂದು ಯೋಜನಾ ಪ್ರಾಧಿಕಾರವು, ರಾಜ್ಯ ಸರ್ಕಾರವು ಕಾಲಕಾಲಕ್ಕೆ ಅಗತ್ಯಪಡಿಸಬಹುದಾದಂಥ ವರದಿಗಳನ್ನು ಮತ್ತು ಇತರ ಮಾಹಿತಿಯನ್ನು ರಾಜ್ಯಸರ್ಕಾರಕ್ಕೆ ಒದಗಿಸತಕ್ಕದ್ದು.

**76ಎಂ. ಇತರ ಕಾನೂನುಗಳ ಪರಿಣಾಮ:–** (1) ಈ ಅಧಿನಿಯಮದಲ್ಲಿ ಉಪಬಂಧಿಸಲಾಗಿರುವಂತೆ ಹೊರತು, ಈ ಅಧಿನಿಯಮದ ಉಪಬಂಧಗಳು ಮತ್ತು ಅದರ ಮೇರೆಗೆ ರಚಿಸಲಾಗಿರುವ ನಿಯಮಗಳು, ವಿನಿಯಮನಗಳು ಮತ್ತು ಉಪವಿಧಿಗಳು ಯಾವುದೇ ಇತರ ಕಾನೂನಿನಲ್ಲಿ ಅದಕ್ಕೆ ಅಸಂಗತವಾದುದು ಏನೇ ಒಳಗೊಂಡಿದ್ದಾಗ್ಯೂ ಪರಿಣಾಮವನ್ನು ಹೊಂದಿರತಕ್ಕದ್ದು.

(2) ಯಾವುದೇ ಅಂಥ ಕಾನೂನಿನಲ್ಲಿ ಏನೇ ಒಳಗೊಂಡಿದ್ದಾಗ್ಯೂ,-

(ಎ) ಯಾವುದೇ ಭೂಮಿಗೆ ಸಂಬಂಧಿಸಿದಂತೆ ಅಭಿವೃದ್ಧಿಗಾಗಿ ಅನುಮತಿಯನ್ನು ಈ ಅಧಿನಿಯಮದ ಮೇರೆಗೆ ಪಡೆದುಕೊಂಡಿರುವಾಗ, ಅಂಥ ಅಭಿವೃದ್ಧಿಯನ್ನು, ಅಂಥ ಅಭಿವೃದ್ಧಿಗಾಗಿ ಅಂಥ ಇತರ ಕಾನೂನಿನ ಮೇರೆಗೆ ಅಗತ್ಯಪಡಿಸಲಾದ ಅನುಮತಿ, ಅನುಮೋದನೆ ಅಥವಾ ಮಂಜೂರಾತಿಯನ್ನು ಪಡೆದುಕೊಂಡಿರುವುದಿಲ್ಲವೆಂಬ ಸಂಗತಿಯ ಕಾರಣ ಮಾತ್ರದಿಂದಲೇ ಕಾನೂನು ಬಾಹಿರವಾಗಿ ಕೈಗೊಳ್ಳಲಾಗಿರುವುದಾಗಿ ಅಥವಾ ಕಾರ್ಯಗತಗೊಳಿಸಿರುವುದಾಗಿ ಭಾವಿಸತಕ್ಕದ್ದಲ್ಲ.

(ಬಿ) ಈ ಅಧಿನಿಯಮದ ಮೇರೆಗೆ ಅಂಥ ಅಭಿವೃದ್ಧಿಗಾಗಿ ಅನುಮತಿಯನ್ನು ಪಡೆದುಕೊಂಡಿರದಿದ್ದಾಗ, ಅಂಥ ಅಭಿವೃದ್ಧಿಯನ್ನು, ಅಂಥ ಅಭಿವೃದ್ಧಿಗಾಗಿ, ಅಂಥ ಇತರ ಕಾನೂನಿನ ಮೇರೆಗೆ ಅಗತ್ಯಪಡಿಸಲಾದ ಅನುಮತಿಯನ್ನು, ಅನುಮೋದನೆಯನ್ನು ಅಥವಾ ಮಂಜೂರಾತಿಯನ್ನು ಪಡೆದುಕೊಳ್ಳಲಾಗಿದೆಯೆಂಬ ಕಾರಣ ಮಾತ್ರದಿಂದಲೇ ಕಾನೂನು ಸಮ್ಮತವಾಗಿ ಕೈಗೊಳ್ಳಲಾಗಿದೆ ಎಂದು, ಕಾರ್ಯಗತಗೊಳಿಸಲಾಗಿದೆ ಎಂದು ಭಾವಿಸತಕ್ಕದ್ದಲ್ಲ.]

1. 1964ರ ಅಧಿನಿಯಮ ಸಂ. 14ರ ಮೂಲಕ 76ಎ ಯಿಂದ 76ಎಂ ವರೆಗಿನ ಪ್ರಕರಣಗಳನ್ನು ಸೇರಿಸಲಾಗಿದೆ.

[1][**76ಎನ್. ನಿರ್ಣಯವನ್ನು ಅಥವಾ ಆದೇಶವನ್ನು ರದ್ದುಗೊಳಿಸಲು ರಾಜ್ಯ ಸರ್ಕಾರದ ಅಧಿಕಾರಗಳು:–** (1) ಯೋಜನಾ ಪ್ರಾಧಿಕಾರವು ಅಥವಾ ಅದರ ಪರವಾಗಿ ಹೊರಡಿಸಿದ ನಿರ್ಣಯವನ್ನು ಅಥವಾ ಆದೇಶವನ್ನು ಜಾರಿಗೊಳಿಸಿದರೆ ಅಥವಾ ಯೋಜನಾ ಪ್ರಾಧಿಕಾರವು ಅಥವಾ ಅದರ ಪರವಾಗಿ ಮಾಡಲಿರುವ ಅಥವಾ ಮಾಡಲಾಗುತ್ತಿರುವ ಯಾವುದೇ ಕಾರ್ಯವನ್ನು ಮಾಡಿದರೆ ಅದರಿಂದಾಗಿ ಈ ಅಧಿನಿಯಮದ ಮೂಲಕ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನ ಮೂಲಕ ಪ್ರದತ್ತವಾದ ಅಧಿಕಾರಗಳ ಉಲ್ಲಂಘನೆಯಾಗುತ್ತದೆಂದು ಅಥವಾ ಆ ಅಧಿಕಾರಗಳ ವ್ಯಾಪ್ತಿಯನ್ನು ಮೀರಿದಂತಾಗುತ್ತದೆಂದು ಅಥವಾ ಶಾಂತಿಗೆ ಭಂಗ ಉಂಟುಮಾಡುವ ಅಥವಾ ಸಾರ್ವಜನಿಕರಿಗೆ ಅಥವಾ ಯಾವುದೇ ವರ್ಗದವರಿಗೆ ಅಥವಾ ವ್ಯಕ್ತಿಗಳ ಸಮೂಹಕ್ಕೆ ಹಾನಿಯುಂಟು ಮಾಡುವ ಅಥವಾ ಕಿರುಕುಳವನ್ನುಂಟು ಮಾಡುವ ಸಂಭವವಿದೆ ಎಂದು ಅಥವಾ ಯೋಜನಾ ಪ್ರಾಧಿಕಾರದ ಹಿತಾಸಕ್ತಿಗೆ ಹಾನಿಯಾಗುವ ಸಂಭವವಿದೆ ಎಂದು ರಾಜ್ಯ ಸರ್ಕಾರವು ಅಭಿಪ್ರಾಯಪಟ್ಟರೆ, ರಾಜ್ಯ ಸರ್ಕಾರವು,–

(ಎ) ನಿರ್ಣಯವನ್ನು ಅಥವಾ ಆದೇಶವನ್ನು ಪೂರ್ಣವಾಗಿ ಅಥವಾ ಭಾಗಶಃ ಏಕೆ ರದ್ದುಗೊಳಿಸಬಾರದು; ಅಥವಾ

(ಬಿ) ಸಂಬಂಧಪಟ್ಟ ಯಾವುದೇ ವಿನಿಯಮನವನ್ನು ಅಥವಾ ಉಪವಿಧಿಯನ್ನು ಪೂರ್ಣವಾಗಿ ಅಥವಾ ಭಾಗಶಃ ಏಕೆ ನಿರಸನಗೊಳಿಸಬಾರದು

– ಎಂಬ ಬಗ್ಗೆ ಹದಿನೈದು ದಿನಗಳಿಗಿಂತ ಕಡಿಮೆಯಿಲ್ಲದ ನಿರ್ದಿಷ್ಟ ಅವಧಿಯೊಳಗೆ ಕಾರಣ ತೋರಿಸುವಂತೆ, ಯೋಜನಾ ಪ್ರಾಧಿಕಾರಕ್ಕೆ ನೋಟೀಸು ಕೊಟ್ಟ ತರುವಾಯ ಲಿಖಿತ ಆದೇಶದ ಮೂಲಕ ಅಂಥ ನಿರ್ಣಯದ ಅಥವಾ ಆದೇಶದ ಜಾರಿಯನ್ನು ತಡೆಹಿಡಿಯಬಹುದು ಅಥವಾ ಅಂತಹ ಯಾವುದೇ ಕಾರ್ಯ ಮಾಡುವುದನ್ನು ನಿಷೇಧಿಸಬಹುದು.

(2) ಯೋಜನಾ ಪ್ರಾಧಿಕಾರದಿಂದ ಸ್ವೀಕರಿಸಿದ ಉತ್ತರ ಯಾವುದಾದರೂ ಇದ್ದರೆ, ಅದನ್ನು ಪರಿಶೀಲಿಸಿದ ತರುವಾಯ ಮತ್ತು ರಾಜ್ಯ ಸರ್ಕಾರವು ತಾನು ಸೂಕ್ತವೆಂದು ಯೋಚಿಸುವಂಥ ವಿಚಾರಣೆಯನ್ನು ನಡೆಸಿದ ತರುವಾಯ ನಿರ್ಣಯವನ್ನು ಅಥವಾ ಆದೇಶವನ್ನು ರದ್ದುಮಾಡುವ ಅಥವಾ ವಿನಿಯಮನವನ್ನು ಅಥವಾ ಉಪವಿಧಿಯನ್ನು ನಿರಸನಗೊಳಿಸುವ ಆದೇಶವನ್ನು ಹೊರಡಿಸಬಹುದು ಮತ್ತು ಆ ಬಗ್ಗೆ ಯೋಜನಾ ಪ್ರಾಧಿಕಾರಕ್ಕೆ ತಿಳಿಸಬಹುದು.

(3) ಯೋಜನಾ ಪ್ರಾಧಿಕಾರವು ಸಲ್ಲಿಸಿದ ಇನ್ನೂ ಹೆಚ್ಚಿನ ಮನವಿಯ ಮೇಲೆ ಅಥವಾ ಅನ್ಯಥಾ (2)ನೇ ಉಪಪ್ರಕರಣದ ಮೇರೆಗೆ ಹೊರಡಿಸಿದ ಆದೇಶವನ್ನು ಯಾವುದೇ ಕಾಲದಲ್ಲಿ ರಾಜ್ಯ ಸರ್ಕಾರವು ಪರಿಷ್ಕರಿಸಬಹುದು, ಮಾರ್ಪಾಟುಗೊಳಿಸಬಹುದು ಅಥವಾ ರದ್ದುಗೊಳಿಸಬಹುದು.

**76ಓ. ಅನುಮತಿ ಮುಂತಾದವುಗಳನ್ನು ತಡೆಹಿಡಿಯಲು ಅಥವಾ ರದ್ದುಗೊಳಿಸಲು ಯೋಜನಾ ಪ್ರಾಧಿಕಾರದ ಅಧಿಕಾರ:–** ಯೋಜನಾ ಪ್ರಾಧಿಕಾರವು ಮಂಜೂರು ಮಾಡಿದ ಯಾವುದೇ ಲೈಸೆನ್ಸನ್ನು, ಅನುಮತಿಯನ್ನು ಅಥವಾ ಮಂಜೂರಾತಿಯನ್ನು,-

(i) ಮಂಜೂರಾತಿ ಪಡೆದ ವ್ಯಕ್ತಿಯು, ಯಾವ ನಿಬಂಧನೆಗಳಿಗೆ ಅಥವಾ ಷರತ್ತುಗಳಿಗೆ ಒಳಪಟ್ಟು ಅಂಥ ಲೈಸೆನ್ಸನ್ನು, ಅನುಮತಿಯನ್ನು ಅಥವಾ ಮಂಜೂರಾತಿಯನ್ನು ನೀಡಲಾಗಿತ್ತೋ ಅವುಗಳ ಪೈಕಿ ಯಾವುದನ್ನಾದರೂ ತಪ್ಪಿಸಿದ್ದರೆ ಅಥವಾ ಉಲ್ಲಂಘಿಸಿದ್ದರೆ; ಅಥವಾ

(ii) ಮಂಜೂರಾತಿ ಪಡೆದ ವ್ಯಕ್ತಿಯು, ಅಂಥ ಲೈಸೆನ್ಸಿಗೆ, ಅನುಮತಿಗೆ ಅಥವಾ ಮಂಜೂರಾತಿಗೆ ಸಂಬಂಧಪಟ್ಟ ಯಾವುದೇ ವಿಷಯದ ಸಂಬಂಧದಲ್ಲಿ ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿಸಿದ ಯಾವುದೇ ನಿಯಮದ, ಯಾವುದೇ ಉಪಬಂಧವನ್ನು, ಉಪವಿಧಿಯನ್ನು ಅಥವಾ ವಿನಿಯಮನವನ್ನು ಉಲ್ಲಂಘಿಸಿದ ಬಗ್ಗೆ ನಿರ್ಣೀತ ಅಪರಾಧಿಯಾಗಿದ್ದರೆ; ಅಥವಾ

(iii) ಮಂಜೂರಾತಿ ಪಡೆದ ವ್ಯಕ್ತಿಯು, ಅಂಥ ಲೈಸೆನ್ಸನ್ನು, ಅನುಮತಿಯನ್ನು ಅಥವಾ ಮಂಜೂರಾತಿಯನ್ನು ತಪ್ಪು ನಿರೂಪಣೆಯಿಂದ ಅಥವಾ ಮೋಸದಿಂದ ಪಡೆದುಕೊಂಡಿದ್ದರೆ

– ಅದನ್ನು ಅಮಾನತ್ತಿನಲ್ಲಿಡಬಹುದು ಅಥವಾ ರದ್ದುಗೊಳಿಸಬಹುದು:

ಪರಂತು, ಈ ಪ್ರಕರಣದ ಮೇರೆಗೆ ಯಾವುದೇ ಆದೇಶವನ್ನು ಮಾಡುವ ಮೊದಲು, ಯೋಜನಾ ಪ್ರಾಧಿಕಾರವು ಮಂಜೂರಾತಿ ಪಡೆದ ವ್ಯಕ್ತಿಗೆ ಪ್ರಸ್ತಾವಿತ ಆದೇಶದ ವಿರುದ್ಧ ಮನವಿ ಸಲ್ಲಿಸಲು ಸೂಕ್ತ ಅವಕಾಶವನ್ನು ನೀಡತಕ್ಕದ್ದು.][1]

1. 1991ರ ಅಧಿನಿಯಮ ಸಂ. 17ರ ಮೂಲಕ 19-4-1991 ರಿಂದ ಜಾರಿಗೆ ಬರುವಂತೆ 76ಎನ್ ಮತ್ತು 76ಓ ಪ್ರಕರಣಗಳನ್ನು ಸೇರಿಸಲಾಗಿದೆ.

**77. ಅಂತಿಮ ಕಾರ್ಯಯೋಜನೆಗೆ ಸಂಬಂಧಿಸಿದಂತೆ ದಸ್ತಾವೇಜುಗಳ, ನಕ್ಷೆಯ ಅಥವಾ ನಕಾಶೆಯ ನೋಂದಣಿಯು ಅಗತ್ಯವಾಗಿರುವುದಿಲ್ಲ:–** (1) ಭಾರತ ನೋಂದಣಿ ಅಧಿನಿಯಮ, 1908 (1908ರ ಕೇಂದ್ರ ಅಧಿನಿಯಮ XVI) ರಲ್ಲಿರುವುದು ಯಾವುದೂ, ಜಾರಿಗೆ ಬಂದಿರುವಂಥ ಮತ್ತು ರದ್ದುಪಡಿಸದೆ

ಇರುವಂಥ ಅಂತಿಮ ಕಾರ್ಯಯೋಜನೆಗೆ ಸಂಬಂಧಿಸಿದಂತೆ ಸಿದ್ಧಪಡಿಸಿದ, ರಚಿಸಿದ ಅಥವಾ ಮಂಜೂರು ಮಾಡಿದ ಯಾವುದೇ ದಸ್ತಾವೇಜಿನ, ನಕ್ಷೆಯ ಅಥವಾ ನಕಾಶೆಯ ನೋಂದಣಿಯನ್ನು ಅಗತ್ಯಪಡಿಸುವುದೆಂದು ಭಾವಿಸತಕ್ಕದ್ದಲ್ಲ.

(2) ಅಂಥ ಎಲ್ಲಾ ದಸ್ತಾವೇಜುಗಳು, ನಕ್ಷೆಗಳು ಮತ್ತು ನಕಾಶೆಗಳನ್ನು ಭಾರತ ನೋಂದಣಿ ಅಧಿನಿಯಮ, 1908ರ 48ನೇ ಪ್ರಕರಣದ ಮತ್ತು 49ನೇ ಪ್ರಕರಣದ ಉದ್ದೇಶಗಳಿಗಾಗಿ ಆ ಅಧಿನಿಯಮದ ಉಪಬಂಧಗಳಿಗೆ ಅನುಸಾರವಾಗಿ ನೋಂದಾಯಿತವಾದವುಗಳೆಂದು ಮತ್ತು ನೋಂದಣಿಯಾಗ ಬೇಕಾದವುಗಳೆಂದು ಭಾವಿಸತಕ್ಕದ್ದು:

ಪರಂತು, ಮಂಜೂರಾದ ಕಾರ್ಯಯೋಜನೆಗೆ ಸಂಬಂಧಪಟ್ಟ ದಸ್ತಾವೇಜುಗಳ, ನಕ್ಷೆಗಳ ಮತ್ತು ನಕಾಶೆಗಳ ಪ್ರತಿಗಳನ್ನು ಸಂಬಂಧಪಟ್ಟ ಉಪನೋಂದಣಿ ಕಚೇರಿಗೆ ಕಳುಹಿಸತಕ್ಕದ್ದು. ಅಲ್ಲಿ ಅಂಥ ಪ್ರತಿಗಳನ್ನು ಇಡತಕ್ಕದ್ದು ಮತ್ತು ಅವುಗಳನ್ನು ನಿಯಮಿಸಿದ ರೀತಿಯಲ್ಲಿ ಸಾರ್ವಜನಿಕರಿಗೆ ದೊರೆಯುವಂತೆ ಮಾಡತಕ್ಕದ್ದು.

**78. ಅಸ್ತಿತ್ವದಲ್ಲಿರುವುದು ನಿಂತುಹೋಗಿರುವ ಅಥವಾ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವುದು ನಿಂತುಹೋಗಿರುವ ಯೋಜನಾ ಪ್ರಾಧಿಕಾರದ ಸ್ವತ್ತನ್ನು ಮತ್ತು ಹಕ್ಕುಗಳನ್ನು ನಿಹಿತಗೊಳಿಸುವುದು:–** ಯಾವುದೇ ಯೋಜನಾ ಪ್ರಾಧಿಕಾರವು ಅಸ್ತಿತ್ವದಲ್ಲಿರುವುದು ನಿಂತು ಹೋದಾಗ ಅಥವಾ ಪಟ್ಟಣ ಯೋಜನಾ ಕಾರ್ಯಯೋಜನೆಯಲ್ಲಿ ಸೇರಿಸಿದ ಯಾವುದೇ ಪ್ರದೇಶದ ಮೇಲೆ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವುದು ನಿಂತು ಹೋದಾಗ, ಈ ಅಧಿನಿಯಮದ ಮೇರೆಗೆ ಅಂಥ ಯೋಜನಾ ಪ್ರಾಧಿಕಾರದಲ್ಲಿ ನಿಹಿತವಾಗಿರುವ ಸ್ವತ್ತು ಮತ್ತು ಹಕ್ಕುಗಳು, ಅವುಗಳಿಗೆ ಸಂಬಂಧಿಸಿದ ಎಲ್ಲಾ ಋಣಭಾರಗಳಿಗೆ ಮತ್ತು ಹೊಣೆಗಾರಿಕೆಗಳಿಗೆ ಒಳಪಟ್ಟು, ಅಂಥ ಯೋಜನಾ ಪ್ರಾಧಿಕಾರದ ಅಥವಾ ಪ್ರಾಧಿಕಾರಗಳ ಸಮ್ಮತಿಯಿಂದ ಅಧಿಸೂಚನೆಯ ಮೂಲಕ ರಾಜ್ಯ ಸರ್ಕಾರವು ನಿರ್ದೇಶಿಸಬಹುದಾದಂಥ ಯೋಜನಾ ಪ್ರಾಧಿಕಾರದಲ್ಲಿ ಅಥವಾ ಪ್ರಾಧಿಕಾರಗಳಲ್ಲಿ ನಿಹಿತಗೊಳ್ಳತಕ್ಕದ್ದು; ಮತ್ತು ಆ ಯೋಜನಾ ಪ್ರಾಧಿಕಾರವು ಅಥವಾ ಅಂಥ ಪ್ರತಿಯೊಂದು ಯೋಜನಾ ಪ್ರಾಧಿಕಾರವು ಯಾವ ಅಧಿಕಾರ ವ್ಯಾಪ್ತಿಯೊಳಗೆ ಅಂಥ ಕಾರ್ಯಯೋಜನೆಗಳು ಅಥವಾ ಕಾರ್ಯಯೋಜನೆಯ ಅಂಥ ಭಾಗವು ಬರುವುದೋ ಅವುಗಳನ್ನು ಯೋಜನಾ ಪ್ರಾಧಿಕಾರವು ಅದು ಅಸ್ತಿತ್ವದಲ್ಲಿರುವುದು ನಿಂತುಹೋಗುವುದಕ್ಕೆ ಅಥವಾ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವುದು ನಿಂತು ಹೋಗುವುದಕ್ಕೆ ನಿಕಟಪೂರ್ವದಲ್ಲಿ ಹೊಂದಿತ್ತೋ ಆ ಕಾರ್ಯಯೋಜನೆಗೆ ಅಥವಾ ಕಾರ್ಯಯೋಜನೆಯ ಅಂಥ ಭಾಗಕ್ಕೆ ಸಂಬಂಧಿಸಿದಂತೆ ಈ ಅಧಿನಿಯಮದ ಮೇರೆಗೆ ಎಲ್ಲಾ ಅಧಿಕಾರವನ್ನು ಹೊಂದಿರತಕ್ಕದ್ದು.

**79. ಯೋಜನಾ ಪ್ರಾಧಿಕಾರವು ಅಧಿಕಾರಗಳನ್ನು ಚಲಾಯಿಸುವಲ್ಲಿ ಅಥವಾ ಕರ್ತವ್ಯವನ್ನು ನೆರವೇರಿಸುವಲ್ಲಿ ತಪ್ಪುವುದು:–** (1) ಯಾವುದೇ ಯೋಜನಾ ಪ್ರಾಧಿಕಾರವು ಈ ಅಧಿನಿಯಮದ ಯಾವುದೇ ಉಪಬಂಧದ ಮೇರೆಗೆ ಅದಕ್ಕೆ ಪ್ರದಾನ ಮಾಡಿದ ಯಾವುದೇ ಅಧಿಕಾರವನ್ನು ಅಥವಾ ವಿಧಿಸಿದ ಕರ್ತವ್ಯವನ್ನು ಚಲಾಯಿಸಲು ಅಥವಾ ನೆರವೇರಿಸಲು ಸಕ್ಷಮವಾಗಿಲ್ಲವೆಂದು ಅಥವಾ ಅದನ್ನು ಚಲಾಯಿಸಲು ಅಥವಾ ನೆರವೇರಿಸಲು ನಿರ್ಲಕ್ಷಿಸಿದೆ ಎಂದು ಅಥವಾ ವಿಫಲವಾಗಿದೆ ಎಂದು ರಾಜ್ಯ ಸರ್ಕಾರವು ಅಭಿಪ್ರಾಯಪಟ್ಟರೆ, ರಾಜ್ಯ ಸರ್ಕಾರವು ಅಥವಾ ರಾಜ್ಯ ಸರ್ಕಾರ ಈ ಬಗ್ಗೆ ನೇಮಕ ಮಾಡಿದ ಯಾರೇ ವ್ಯಕ್ತಿಯು ಅಥವಾ ವ್ಯಕ್ತಿಗಳು ಅಂಥ ಅಧಿಕಾರವನ್ನು ಚಲಾಯಿಸಬಹುದು ಅಥವಾ ಅಂಥ ಕರ್ತವ್ಯಗಳನ್ನು ನೆರವೇರಿಸಬಹುದು.

(2) ಅಂಥ ಅಧಿಕಾರವನ್ನು ಚಲಾಯಿಸುವಲ್ಲಿ ಅಥವಾ ಅಂಥ ಕರ್ತವ್ಯವನ್ನು ನೆರವೇರಿಸುವಲ್ಲಿ ರಾಜ್ಯ ಸರ್ಕಾರವು ಅಥವಾ ಅಂಥ ವ್ಯಕ್ತಿಯು ವಹಿಸಿದ ಯಾವುವೇ ವೆಚ್ಚಗಳನ್ನು ಯೋಜನಾ ಪ್ರಾಧಿಕಾರದ ನಿಧಿಗಳಿಂದ ಸಂದಾಯ ಮಾಡತಕ್ಕದ್ದು ಮತ್ತು ರಾಜ್ಯ ಸರ್ಕಾರವು, ಯಾವುದೇ ಅಂಥ ನಿಧಿಯ ಅಭಿರಕ್ಷೆಯನ್ನು ತಾತ್ಕಾಲಿಕವಾಗಿ ಹೊಂದಿರುವ ಯಾರೇ ವ್ಯಕ್ತಿಗೆ ಅಂಥ ನಿಧಿಗಳಿಂದ ಅಂಥ ವೆಚ್ಚಗಳನ್ನು ಸಂದಾಯ ಮಾಡಲು ನಿರ್ದೇಶಿಸುವ ಆದೇಶವನ್ನು ಮಾಡಬಹುದು ಮತ್ತು ಅಂಥ ವ್ಯಕ್ತಿಯು ಅಂಥ ಆದೇಶವನ್ನು ಪಾಲಿಸಲು ಬದ್ಧನಾಗಿರತಕ್ಕದ್ದು.

**80. ಸ್ಥಳೀಯ ಪ್ರಾಧಿಕಾರದ ವಿಸರ್ಜನೆಯ ಅಥವಾ ರದ್ದಿಯಾತಿಯ ಸಂದರ್ಭದಲ್ಲಿ ವಿಶೇಷ ಉಪಬಂಧ:–** (1) ಈ ಅಧಿನಿಯಮದ ಮೇರೆಗೆ ಯೋಜನಾ ಪ್ರಾಧಿಕಾರವಾಗಿರುವ ಸ್ಥಳೀಯ ಪ್ರಾಧಿಕಾರವನ್ನು, ಅದರ ರಚನೆಯನ್ನು ನಿಯಂತ್ರಿಸುವ ಕಾನೂನಿನ ಮೇರೆಗೆ ವಿಸರ್ಜಿಸಿರುವಲ್ಲಿ ಅಥವಾ ರದ್ದುಪಡಿಸಿರುವಲ್ಲಿ, ಅಂಥ ಸ್ಥಳೀಯ ಪ್ರಾಧಿಕಾರದ ಅಧಿಕಾರಗಳನ್ನು ಚಲಾಯಿಸಲು ಮತ್ತು ಕರ್ತವ್ಯಗಳನ್ನು ನೆರವೇರಿಸಲು ಅಂಥ ಕಾನೂನಿನ ಮೇರೆಗೆ ನೇಮಕಗೊಂಡ ವ್ಯಕ್ತಿಯನ್ನು ಅಥವಾ ವ್ಯಕ್ತಿಗಳನ್ನು, ಈ ಅಧಿನಿಯಮದ 2ನೇ ಪ್ರಕರಣದ (5)ನೇ ಖಂಡದ ಅರ್ಥ ವ್ಯಾಪ್ತಿಯೊಳಗೆ ಸ್ಥಳೀಯ ಪ್ರಾಧಿಕಾರವೆಂಬುದಾಗಿ ಭಾವಿಸತಕ್ಕದ್ದು, ಮತ್ತು ಅಂಥ ಸ್ಥಳೀಯ ಪ್ರಾಧಿಕಾರದ ವಿಸರ್ಜನೆ ಅಥವಾ ರದ್ದಿಯಾತಿಯ ಅವಧಿಯಲ್ಲಿ ಈ ಅಧಿನಿಯಮದ ಮೇರೆಗೆ ಯೋಜನಾ ಪ್ರಾಧಿಕಾರದ ಎಲ್ಲಾ ಅಧಿಕಾರಗಳನ್ನು ಚಲಾಯಿಸಬಹುದು ಮತ್ತು ಎಲ್ಲಾ ಕರ್ತವ್ಯಗಳನ್ನು ನೆರವೇರಿಸಬಹುದು.

(2) ಈ ಅಧಿನಿಯಮದ ಮೇರೆಗೆ ಯೋಜನಾ ಪ್ರಾಧಿಕಾರದ ಅಧಿಕಾರಗಳನ್ನು ಚಲಾಯಿಸುವ ಮತ್ತು ಕರ್ತವ್ಯಗಳನ್ನು ನೆರವೇರಿಸುವ, ಮೇಲೆ ಹೇಳಿದಂತೆ ನೇಮಕಗೊಂಡಿರುವ ವ್ಯಕ್ತಿಯ ಅಥವಾ ವ್ಯಕ್ತಿಗಳ ಸಂದರ್ಭದಲ್ಲಿ, ಅಂಥ ಅಧಿಕಾರಗಳನ್ನು ಚಲಾಯಿಸುವ ಮತ್ತು ಅಂಥ ಕರ್ತವ್ಯಗಳನ್ನು ನೆರವೇರಿಸುವ ಯೋಜನಾ ಪ್ರಾಧಿಕಾರದಲ್ಲಿ ಈ ಅಧಿನಿಯಮದ ಉಪಬಂಧಗಳ ಮೇರೆಗೆ ನಿಹಿತಗೊಳಿಸಬಹುದಾದಂಥ ಯಾವುದೇ ಸ್ವತ್ತು, ಆ ಸ್ಥಳೀಯ ಪ್ರಾಧಿಕಾರದ ವಿಸರ್ಜನೆಯ ಅಥವಾ ರದ್ದಿಯಾತಿಯ ಅವಧಿಯಲ್ಲಿ ರಾಜ್ಯ ಸರ್ಕಾರದಲ್ಲಿ ನಿಹಿತಗೊಳ್ಳತಕ್ಕದ್ದು ಮತ್ತು ಅಂಥ ಸ್ವತ್ತು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ನಿರ್ದೇಶಿಸಬಹುದಾದಂಥ ಸ್ಥಳೀಯ ಪ್ರಾಧಿಕಾರದಲ್ಲಿ ಸದರಿ ಅವಧಿಯ ಕೊನೆಯಲ್ಲಿ ನಿಹಿತಗೊಳ್ಳತಕ್ಕದ್ದು.

[1][3) ಯೋಜನಾ ಪ್ರಾಧಿಕಾರವಾಗಿಲ್ಲದಂಥ ಸ್ಥಳೀಯ ಪ್ರಾಧಿಕಾರವನ್ನು ಅದರ ರಚನೆಯನ್ನು ನಿಯಂತ್ರಿಸುವ ಕಾನೂನಿನ ಮೇರೆಗೆ ವಿಸರ್ಜಿಸಿದಲ್ಲಿ ಅಥವಾ ರದ್ದುಗೊಳಿಸಿದಲ್ಲಿ, ಅಂಥ ಸ್ಥಳೀಯ ಪ್ರಾಧಿಕಾರದ ಪ್ರತಿನಿಧಿಗಳನ್ನು 4ಸಿ ಪ್ರಕರಣದ (3)ನೇ ಉಪಪ್ರಕರಣದ (iii)ನೇ ಖಂಡದ ಉದ್ದೇಶಕ್ಕಾಗಿ ಅಂಥ ಸ್ಥಳೀಯ ಪ್ರಾಧಿಕಾರದ ಅಧಿಕಾರಗಳನ್ನು ಚಲಾಯಿಸಲು ಮತ್ತು ಕರ್ತವ್ಯಗಳನ್ನು ನೆರವೇರಿಸಲು ಅಂಥ ಕಾನೂನಿನ ಮೇರೆಗೆ ನೇಮಕಗೊಂಡಿರುವ ವ್ಯಕ್ತಿಯು ಅಥವಾ ವ್ಯಕ್ತಿಗಳು ಅಂಥ ಸ್ಥಳೀಯ ಪ್ರಾಧಿಕಾರದ ಅಧಿಕಾರಿಗಳೊಳಗಿಂದ ನಾಮ ನಿರ್ದೇಶನ ಮಾಡತಕ್ಕದ್ದು ಮತ್ತು ಅಂಥ ಪ್ರತಿನಿಧಿಗಳು 4ಡಿ ಪ್ರಕರಣದ (1) ಮತ್ತು (2)ನೇ ಉಪಪ್ರಕರಣಗಳಲ್ಲಿ ಏನೇ ಒಳಗೊಂಡಿದ್ದರೂ, ಸದರಿ ವ್ಯಕ್ತಿಯ ಅಥವಾ ವ್ಯಕ್ತಿಗಳ ಇಷ್ಟಪರ್ಯಂತ ಪದಧಾರಣ ಮಾಡತಕ್ಕದ್ದು.][1]

1. 1968ರ ಅಧಿನಿಯಮ ಸಂ.2ರ ಮೂಲಕ 12.9.1967 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][**80ಎ. ಯೋಜನಾ ಪ್ರಾಧಿಕಾರಗಳ ವಿಸರ್ಜನೆ:–** (1) ಯಾವ ಉದ್ದೇಶಗಳಿಗಾಗಿ ಯಾವುದೇ ಯೋಜನಾ ಪ್ರಾಧಿಕಾರವನ್ನು ಈ ಅಧಿನಿಯಮದ ಮೇರೆಗೆ ಸ್ಥಾಪಿಸಲಾಗಿತ್ತೋ ಆ ಉದ್ದೇಶಗಳನ್ನು, ರಾಜ್ಯ ಸರ್ಕಾರದ ಅಭಿಪ್ರಾಯದಲ್ಲಿ ಯೋಜನಾ ಪ್ರಾಧಿಕಾರದ ಅಸ್ತಿತ್ವವನ್ನು ಮುಂದುವರಿಸುವುದನ್ನು ಅನವಶ್ಯಗೊಳಿಸುವ ಹಾಗೆ ಗಣನೀಯವಾಗಿ ಸಾಧಿಸಲಾಗಿದೆಯೆಂದು ರಾಜ್ಯ ಸರ್ಕಾರಕ್ಕೆ ಮನದಟ್ಟಾದರೆ, ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಆ

ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ದಿನಾಂಕದಿಂದ ಜಾರಿಗೆ ಬರುವಂತೆ ಯೋಜನಾ ಪ್ರಾಧಿಕಾರವನ್ನು ವಿಸರ್ಜಿಸತಕ್ಕದೆಂದು ಘೋಷಿಸಬಹುದು ಮತ್ತು ಯೋಜನಾ ಪ್ರಾಧಿಕಾರವು ಅದಕ್ಕನುಸಾರವಾಗಿ ವಿಸರ್ಜಿತವಾಗಿರುವುದಾಗಿ ಭಾವಿಸತಕ್ಕದ್ದು.

(2) (1)ನೇ ಉಪಪ್ರಕರಣದ ಮೇರೆಗೆ ಯೋಜನಾ ಪ್ರಾಧಿಕಾರವನ್ನು ವಿಸರ್ಜಿಸಿದ ದಿನಾಂಕದಿಂದ ಜಾರಿಗೆ ಬರುವಂತೆ, 78ನೇ ಪ್ರಕರಣದ ಮೇರೆಗೆ ನಿರ್ದೇಶನ ಹೊರಡಿಸಿರುವುದನ್ನು ಹೊರತುಪಡಿಸಿ, ಅಂಥ ಯೋಜನಾ ಪ್ರಾಧಿಕಾರದ ಎಲ್ಲಾ ಸ್ವತ್ತುಗಳು, ಹಕ್ಕುಗಳು ಮತ್ತು ಹೊಣೆಗಾರಿಕೆಗಳು ರಾಜ್ಯ ಸರ್ಕಾರದಲ್ಲಿ ನಿಹಿತಗೊಳ್ಳತಕ್ಕದ್ದು.][1]

1. 1964ರ ಅಧಿನಿಯಮ ಸಂ.14ರ ಮೂಲಕ 26-3-1964 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][**81. ಯೋಜನಾ ಪ್ರಾಧಿಕಾರದ ಅಧಿಕಾರಗಳ ಪ್ರತ್ಯಾಯೋಜನೆ:–** ರಾಜ್ಯ ಸರ್ಕಾರವು, ಅಧಿಸೂಚನೆ ಮೂಲಕ ಮತ್ತು ಅದರಲ್ಲಿ ನಿರ್ದಿಷ್ಟಪಡಿಸಬಹುದಾದಂಥ ನಿರ್ಬಂಧಗಳಿಗೆ ಮತ್ತು ಷರತ್ತುಗಳಿಗೆ ಒಳಪಟ್ಟು, ಈ ಅಧಿನಿಯಮದ ಮೇರೆಗೆ ಯೋಜನಾ ಪ್ರಾಧಿಕಾರದ ಯಾವುವೇ ಅಧಿಕಾರಗಳನ್ನು ಮತ್ತು ಪ್ರಕಾರ್ಯಗಳನ್ನು, ಯಾವುದೇ ಸ್ಥಳೀಯ ಪ್ರಾಧಿಕಾರಕ್ಕೆ ಅಥವಾ ಸ್ಥಳೀಯ ಪ್ರಾಧಿಕಾರದ ಯಾರೇ ಅಧಿಕಾರಿಗೆ ಪ್ರತ್ಯಾಯೋಜಿಸಬಹುದು.][1]

1. 2005ರ ಅಧಿನಿಯಮ ಸಂ. 1ರ ಮೂಲಕ 14-2-2005ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][**81ಎ.** ****][1]

1. 2005ರ ಅಧಿನಿಯಮ ಸಂ.1ರ ಮೂಲಕ 14-2-2005ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

[1][**81ಬಿ. ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವನ್ನು ರಚಿಸಿದ ತರುವಾಯ ಉಂಟಾಗುವ ಪರಿಣಾಮಗಳು:–** ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ, 1976ರ ಮೇರೆಗೆ ಯಾವ ದಿನಾಂಕದಿಂದ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವನ್ನು ರಚಿಸಲಾಯಿತೋ ಆ ದಿನಾಂಕದಿಂದ ಜಾರಿಗೆ ಬರುವಂತೆ ಈ ಕೆಳಕಂಡ ಪರಿಣಾಮಗಳು ಉಂಟಾಗತಕ್ಕದ್ದು,–

1. 1976ರ ಅಧಿನಿಯಮ ಸಂ. 12ರ ಮೂಲಕ 20-12-1975 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(i) ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವನ್ನು ಯಾವ ದಿನಾಂಕದಂದು ರಚಿಸಲಾಯಿತೋ ಆ ದಿನಾಂಕಕ್ಕೆ ನಿಕಟ ಪೂರ್ವದಲ್ಲಿ ಬೆಂಗಳೂರು ನಗರಕ್ಕಾಗಿ ಯಾವ ಪ್ರದೇಶದ ಮೇಲೆ ನಗರ ಯೋಜನಾ ಪ್ರಾಧಿಕಾರವು ಅಧಿಕಾರ ವ್ಯಾಪ್ತಿಯನ್ನು ಹೊಂದಿತ್ತೋ ಆ ಪ್ರದೇಶದ ಮೇಲೆ ಅಧಿಕಾರ ವ್ಯಾಪ್ತಿಯೊಂದಿಗೆ ಬೆಂಗಳೂರು ನಗರವನ್ನೊಳಗೊಂಡ ಸ್ಥಳೀಯ ಯೋಜನಾ ಪ್ರದೇಶಕ್ಕಾಗಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಸ್ಥಳೀಯ ಯೋಜನಾ ಪ್ರಾಧಿಕಾರವಾಗಿರತಕ್ಕದ್ದು;

(ii) ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಬೆಂಗಳೂರು ನಗರಕ್ಕಾಗಿ ರಚಿಸಿದ ಸ್ಥಳೀಯ ಯೋಜನಾ ಪ್ರಾಧಿಕಾರವಾಗಿದ್ದರೆ ಹೇಗೋ ಹಾಗೇ ಈ ಅಧಿನಿಯಮದ ಮೇರೆಗೆ ಅದು ಅಧಿಕಾರಗಳನ್ನು ಚಲಾಯಿಸತಕ್ಕದ್ದು, ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು ಮತ್ತು ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು;

(iii) ನಗರ ಯೋಜನಾ ಪ್ರಾಧಿಕಾರವು ವಿಸರ್ಜಿತವಾಗತಕ್ಕದ್ದು ಮತ್ತು ಅಂಥ ವಿಸರ್ಜನೆಯಾದ ಮೇಲೆ,–

(ಎ) ಬೆಂಗಳೂರು ನಗರ ಸ್ಥಳೀಯ ಯೋಜನಾ ಪ್ರಾಧಿಕಾರವು ಮಾಡಿದ ಯಾವುದೇ ಕಾರ್ಯವನ್ನು ಅಥವಾ ಕೈಗೊಂಡ ಯಾವುದೇ ಕ್ರಮವನ್ನು (ಮಾಡಿದ ಅಥವಾ ಹೊರಡಿಸಿದ ಯಾವುದೇ ನೇಮಕವನ್ನು, ಅಧಿಸೂಚನೆಯನ್ನು, ಆದೇಶವನ್ನು, ಕಾರ್ಯಯೋಜನೆಯನ್ನು ಅಥವಾ ಉಪವಿಧಿಯನ್ನು ಒಳಗೊಂಡು) ನೀಡಿದ ಯಾವುದೇ ಪ್ರಾರಂಭ ಪ್ರಮಾಣಪತ್ರ ಅಥವಾ ಅನುಮತಿ ಇವುಗಳನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಈ ಅಧಿನಿಯಮದ ಉಪಬಂಧಗಳ ಮೇರೆಗೆ ಮಾಡಿದೆಯೆಂದು, ಕೈಗೊಂಡಿದೆಯೆಂದು, ರಚಿಸಿದೆಯೆಂದು, ಹೊರಡಿಸಿದೆಯೆಂದು ಅಥವಾ ನೀಡಿದೆಯೆಂದು ಭಾವಿಸತಕ್ಕದ್ದು ಮತ್ತು ಅದು ಈ ಅಧಿನಿಯಮದ ಉಪಬಂಧಗಳ ಮೇರೆಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಮಾಡಿದ ಯಾವುದೇ ಕಾರ್ಯ ಅಥವಾ ಕೈಗೊಂಡ ಯಾವುದೇ ಕ್ರಮ, ಮಾಡಿದ ಅಥವಾ ಹೊರಡಿಸಿದ ಯಾವುದೇ ನೇಮಕ, ಅಧಿಸೂಚನೆ, ಆದೇಶ, ಕಾರ್ಯಯೋಜನೆ ಅಥವಾ ಉಪವಿಧಿ, ನೀಡಿದ ಪ್ರಾರಂಭ ಪ್ರಮಾಣಪತ್ರ ಅಥವಾ ಅನುಮತಿಯ ಮೂಲಕ ರದ್ದಾಗುವವರೆಗೆ ಜಾರಿಯಲ್ಲಿರುವುದು ಮುಂದುವರಿಯತಕ್ಕದ್ದು;

(ಬಿ) ಬೆಂಗಳೂರು ನಗರ ಸ್ಥಳೀಯ ಯೋಜನಾ ಪ್ರಾಧಿಕಾರವು, ಅದರೊಂದಿಗೆ ಅಥವಾ ಅದರ ಪರವಾಗಿ ವಹಿಸಿದ ಎಲ್ಲಾ ಬಾಧ್ಯತೆಗಳು ಮತ್ತು ಹೊಣೆಗಾರಿಕೆಗಳು, ಮಾಡಿಕೊಂಡ ಎಲ್ಲಾ ಕರಾರುಗಳು, ಅದು ಮಾಡಲು ವಚನಬದ್ಧವಾಗಿರುವ ಎಲ್ಲಾ ವಿಷಯಗಳನ್ನು ಮತ್ತು ಕಾರ್ಯಗಳನ್ನು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು, ಅದರೊಂದಿಗೆ ಅಥವಾ ಅದರ ಪರವಾಗಿ ವಹಿಸಿಕೊಂಡಿರುವುದಾಗಿ, ಮಾಡಿಕೊಂಡಿರುವುದಾಗಿ ಅಥವಾ ಮಾಡಲು ವಚನಬದ್ಧವಾಗಿರುವುದಾಗಿ ಭಾವಿಸತಕ್ಕದ್ದು;

(ಸಿ) ಬೆಂಗಳೂರು ನಗರ ಸ್ಥಳೀಯ ಯೋಜನಾ ಪ್ರಾಧಿಕಾರದಲ್ಲಿ ನಿಹಿತಗೊಂಡ ಎಲ್ಲಾ ಚರ ಮತ್ತು ಸ್ಥಿರ ಸ್ವತ್ತು ಮತ್ತು ಅದರಲ್ಲಿನ ಯಾವುದೇ ಸ್ವರೂಪದ ಮತ್ತು ಬಗೆಯ ಎಲ್ಲಾ ಹಿತಾಸಕ್ತಿಗಳು ಬೆಂಗಳೂರು ನಗರ ಸ್ಥಳೀಯ ಪ್ರಾಧಿಕಾರವು ಯಾವುದೇ ಬಗೆಯ ವಿವರಣೆಯೊಂದಿಗೆ ಉಪಯೋಗಿಸಿದ, ಅನುಭೋಗಿಸಿದ ಅಥವಾ ಹೊಂದಿದ ಎಲ್ಲಾ ಹಕ್ಕುಗಳೊಂದಿಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಲ್ಲಿ ನಿಹಿತಗೊಳ್ಳತಕ್ಕದ್ದು;

(ಡಿ) ಬೆಂಗಳೂರು ನಗರ ಸ್ಥಳೀಯ ಯೋಜನಾ ಪ್ರಾಧಿಕಾರವು ಅಥವಾ ಅದರ ವಿರುದ್ಧವಾಗಿ ಹೂಡಿದ ಅಥವಾ ಹೂಡಬಹುದಾಗಿದ್ದಂಥ ಎಲ್ಲಾ ದಾವೆಗಳನ್ನು, ಪ್ರಾಸಿಕ್ಯೂಷನ್‌ಗಳನ್ನು ಮತ್ತು ಇತರ ಕಾನೂನು ವ್ಯವಹರಣೆಗಳನ್ನು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಅಥವಾ ಅದರ ವಿರುದ್ಧ ಮುಂದುವರಿಸಬಹುದು ಅಥವಾ ಹೂಡಬಹುದು.][1]

1. 1976ರ ಅಧಿನಿಯಮ ಸಂ. 12ರ ಮೂಲಕ 20-12-1975 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

[1][**81ಸಿ. ಬೆಂಗಳೂರು ಮಹಾನಗರ ಪ್ರದೇಶದ ಸ್ಥೂಲ ಅಭಿವೃದ್ಧಿ ಯೋಜನೆ ಮತ್ತು ಸಮಗ್ರ ಅಭಿವೃದ್ಧಿ ಯೋಜನೆ:–** ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಬೆಂಗಳೂರು ಮಹಾನಗರ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ, 1985ರಲ್ಲಿ ಪರಿಭಾಷಿಸಲಾಗಿರುವಂತಹ ಬೆಂಗಳೂರು ಮಹಾನಗರ ಪ್ರದೇಶದೊಳಗಿನ ಯೋಜನಾ ಪ್ರಾಧಿಕಾರಗಳು 9 ಮತ್ತು 19ನೇ ಪ್ರಕರಣಗಳ ಮೇರೆಗೆ ಕ್ರಮವಾಗಿ ಸ್ಥೂಲ ಅಭಿವೃದ್ಧಿ ಯೋಜನೆಗಳನ್ನು ಮತ್ತು ಸಮಗ್ರ ಅಭಿವೃದ್ಧಿ

